ಧಾರವಾಡದ
ಶ್ರೀ. ಮ. ನಿ. ಜ. ಮುರುಘರಾಜೇಂದ್ರ ಪ್ರಸಾದನಿಲಯದ
ಬೆಳ್ಳಿಹಬ್ಬದ ಸವಿನೆನಪಿನ ಪ್ರಕಟನೆ

ಮಹಾಕವಿ
ಹಂಪೆಯ ಹರಿಹರದೇವ
ವಿರಚಿತ

# ರಕ್ಷಾಶತಕ ಮತ್ತು ಪಂಪಾಶತಕ





ಸಂಪಾದಕರು :
ನಾಳ ಎಂ. ಎ.,
, ಲಿಂಗರಾಜ ಕಾಲೇಜ್, ಬೆಳಗಾವಿ.

ಪ್ರಕಾಶಕರು :
ಸಾಹಿತ್ಯ ಸಮಿತಿ
ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.

೧೯೪೩ ಬೆಲೆ : ೫ ಆಣೆ

ಧಾರವಾಡದ

ಶ್ರೀ. ಮ. ನಿ. ಜ. ಮುರುಘರಾಜೇಂದ್ರ ಪ್ರಸಾದನಿಲಯದ

**ಬೆಳ್ಳಿಹಬ್ಬದ ಸವಿನೆನಪಿನ ಪ್ರಕಟಣೆ**

ಮಹಾಕವಿ

**ಹಂಪೆಯ ಹರಿಹರದೇವ**

ವಿರಚಿತ

# ರಕ್ಷಾಶತಕ ಮತ್ತು ಪಂಪಾಶತಕ




ಸಂಪಾದಕರು :

**ಶಿ. ಶಿ. ಬಸವನಾಳ ಎಂ. ಎ.,**

ಕನ್ನಡ-ಇತಿಹಾಸ ಪ್ರಾಧ್ಯಾಪಕರು, ಲಿಂಗರಾಜ ಕಾಲೇಜ್, ಬೆಳಗಾವಿ.



ಪ್ರಕಾಶಕರು :

**ಸಾಹಿತ್ಯ ಸಮಿತಿ**

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ.

೧೯೪೩ ಬೆಲೆ : ೫ ಅಣೆ

# ಮುನ್ನುಡಿ

ಧಾರವಾಡದ "ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಪ್ರಸಾದನಿಲಯ" ದ ಬೆಳ್ಳಿಹಬ್ಬವು ೧೯೪೩ ಜನವರಿ ತಿಂಗಳಲ್ಲಿ ಬಹು ವಿಜೃಂಭಣೆಯಿಂದ ಜರುಗಿತು. ಈ ಬೆಳ್ಳಿಹಬ್ಬದ ಸವಿನೆನಪಿಗೆಂದು ಮಹಾಕವಿ ಹಂಪೆಯ ಹರಿಹರದೇವನ ಸಮಗ್ರಗ್ರಂಥಗಳನ್ನು ಮುದ್ರಿಸಬೇಕೆಂಬ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ 'ಸಾಹಿತ್ಯ ಸಮಿತಿ' ಯವರ ಆಲೋಚನೆಗೆ ಬೆಳ್ಳಿಹಬ್ಬದ ಕಾರ್ಯಸಮಿತಿಯವರು ಒಪ್ಪಿ ಆ ಬಗೆಗೆ ಒಂದು ನಿರ್ಣಯವನ್ನು ಮಾಡಿದರು. ಸಾಹಿತ್ಯಸಮಿತಿಯವರು ಹರಿಹರನ ಗ್ರಂಥಗಳ ಪ್ರಕಟನೆಯನ್ನು ಕುರಿತು ಒಂದು ವಿಸ್ತೃತ ಯೋಜನೆಯನ್ನು ಸಿದ್ಧಪಡಿಸಿ ಬೆಳ್ಳಿಹಬ್ಬದ ಅಂಗವಾಗಿ ನಡೆದ ವೀರಶೈವ ಸಾಹಿತ್ಯಗೋಷ್ಠಿಯಲ್ಲಿ ಪ್ರಸಿದ್ಧಿಸಿದರು. ಆ ಯೋಜನೆಯು ಅಲ್ಲಿ ನೆರೆದ ಮಹನೀಯರೆಲ್ಲರಿಂದಲೂ ಅಂಗೀಕೃತವಾಗಿ ಚಿತ್ರದುರ್ಗದ ಚಿನ್ಮೂಲಾದ್ರಿ ಬೃಹನ್ಮಠದ ಶ್ರೀಮನ್ನಿರಂಜನ ಜಗದ್ಗುರು ಮುರುಘ ರಾಜೇಂದ್ರ ಮಹಾಸ್ವಾಮಿಗಳವರ ಕೃಪಾಶೀರ್ವಾದಗಳ ಬೆಂಬಲವನ್ನೂ ಪಡೆಯಿತು. ಬೆಳ್ಳಿಹಬ್ಬ ಸಮಾರಂಭದ ಕಾಲದಲ್ಲಿಯೇ ಶ್ರೀ ಶಿವಯೋಗಿಯ ಕೃಪೆಯಿಂದ ಧನಸಂಚಯ ಕಾರ್ಯವೂ ನಡೆಯಿತು.

ಇತ್ತ ಗ್ರಂಥ ಸಂಸ್ಕರಣ, ಸಂಪಾದನೆ ಮೊದಲಾದ ಕಾರ್ಯಗಳಿಗಾಗಿ ಪಂಡಿತರ, ಅನುಭವಿಕರ, ಉತ್ಸಾಹಿಗಳ ಸಮಿತಿಯೊಂದು ಏರ್ಪಾಡಾಗಿ ಕಾರ್ಯೋನ್ಮುಖವಾಯಿತು. ಈ ಗ್ರಂಥಪ್ರಕಟನೆಯಲ್ಲಿ—ಪಾಠಾಂತರ ಅಡಿಟಿಪ್ಪಣಿ, ಶಬ್ದಕೋಶಗಳನ್ನೊಳಗೊಂಡ ರಗಳೆಗಳ ಸಮಗ್ರ ಆವೃತ್ತಿಯೊಂದಲ್ಲದೆ ಬರಿಯ ಮೂಲವುಳ್ಳ-ಅದರೂ ಶುದ್ಧವಾಗಿ ಪರಿಷ್ಕೃತವಾದ-ಒಂದೊಂದೇ ರಗಳೆಯ ಕಿರುಹೊತ್ತಗೆಗಳನ್ನೂ ಪ್ರಸಿದ್ಧಿಸಲಾಗುವುದು. ಇದೀಗ ಓದುಗರ ಕೈಸೇರಿರುವ ಈ "ರಕ್ಷಾಶತಕ-ಪಂಪಾಶತಕ" ಗಳು ಅಂತಹ ಕಿರುಹೊತ್ತಗೆಯ ಮಾದರಿ. ಆದರೆ ಓದುಗರ ಅನುಕೂಲಕ್ಕಾಗಿ ಕಠಿನ ಶಬ್ದಗಳ ಕೋಶವನ್ನೂ ಜೋಡಿಸಲಾಗಿದೆ. ಹಲವು ಪ್ರತಿಗಳ ಸಹಾಯದಿಂದ ಈ ಗ್ರಂಥವು ಶೋಧಿತವಾಗಿ ಮುದ್ರಿತವಾಗಿರುವುದರಿಂದ ಸಕಲಜನಾದರಣೀಯವಾಗುವುದೆಂಬ ಆಸೆಯಿದೆ.

ಧಾರವಾಡ
೧ ಜುಲೈ ೧೯೪೩

ಶಿ. ಶಿ. ಬಸವನಾಳ
ಸಾಹಿತ್ಯ ಸಮಿತಿ ಅಧ್ಯಕ್ಷ

# ಕವಿ ಪರಿಚಯ

ಕನ್ನಡ ಸಾಹಿತ್ಯಪ್ರಪಂಚದಲ್ಲಿ ಹರಿಹರನು ಅಮೋಘವಾದ ಶಕ್ತಿಯುಳ್ಳ ಕವಿಯು. ಭಕ್ತನ ಉತ್ಕಟ ಭಾವ, ಕವಿಯ ಶಕ್ತಿಯುತ ವಾಣಿ ಇವುಗಳ ಸಮರಸ ಆತನ ಕಾವ್ಯಗಳಲ್ಲಿ ಕಂಡುಬರುತ್ತಿದೆ. ಚಂಪೂ ಸಂಪ್ರದಾಯದ ಲಕ್ಷಣಗಳೆಂಬ ಹೊನ್ನ ಸಂಕಲೆಯಿಂದ ಕನ್ನಡ ಕಾವ್ಯವನಿತೆಯನು ಬಿಡುಗಡೆ ಮಾಡಿದ ಕೀರ್ತಿ ಹರಿಹರನದು. ಭಾರವಾದ ತೊಡವುಗಳಿಂದ ಕೊರಗುತ್ತಿದ್ದ ಕನ್ನಡ ಕಾವ್ಯವನಿತೆಯ ಭಾರವನ್ನು ಇಳುಹಿದನು ಹರಿಹರ. ಹಾಗೆ ಭಾರ ಇಳಿಸಿ ಅವಳಿಗೆ ಪುಷ್ಟಿಯನ್ನಿತ್ತು ಅವಳನ್ನು ಬೆಳೆಸಿ ನವೀನವಾದ-ಆದರೆ ಭಾರವಲ್ಲದ-ರೀತಿಯಲ್ಲಿ ಅಲಂಕರಿಸಿ ಹಂಪೆಯ ಪಂಪಾಪತಿಗೆ ತಕ್ಕ ವಧುವನ್ನಾಗಿ ಮಾಡಿದನು ಈ ಭಕ್ತಕವಿ.

ಹರಿಹರದೇವನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಾವ್ಯೋದ್ದೇಶ, ಸಾಹಿತ್ಯರೂಪ, ಭಾಷಾಸ್ವರೂಪ ಹೀಗೆ ಮೂರೆರನಾದ ಕ್ರಾಂತಿಗೆ ಕಾರಣನಾಗಿದ್ದಾನೆ.

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆ ಪದ್ಯಮಂ ।
ತನತನಗಿಂದ್ರ ಚಂದ್ರ ರವಿ ಕರ್ಣ ದಧೀಚಿ ಬಲೀಂದ್ರನೆಂದು ತಾ ॥
ನನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ ।
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ॥

ಎಂಬ ಪದ್ಯದಿಂದ ಈತನ ಕಾವ್ಯೋದ್ದೇಶ ವ್ಯಕ್ತವಾಗುತ್ತಿದೆ. ಈತನ ಈ ಸಂಪ್ರದಾಯವನ್ನೇ ಮುಂದಿನ ಎಲ್ಲ ವೀರಶೈವ ಕವಿಗಳು ಅನುಸರಿಸಿದ್ದಾರೆ.

ವಸ್ತುಕ ಕಾವ್ಯದಿಂದಲೇ ಕವಿಯ ಕೀರ್ತಿ ಹೆಚ್ಚುವುದೆಂಬ ನಂಬುಗೆ ಇದುವರೆಗೆ ಬಳೆದು ಬಂದಿತ್ತು. ಹರಿಹರದೇವನು ಅದನ್ನು ಹೊಡೆದೋಡಿಸಿ ಹೃದಯಂಗಮವಾದ ರಗಳೆಗಳನ್ನು ರಚಿಸಿದನು; ಷಟ್ಪದಿಗಳಿಗೆ ಹಾದಿ ಹಾಕಿಕೊಟ್ಟನು. ಈತನಿಂದಲೇ ಕನ್ನಡ ಕಾವ್ಯನಂದನದಲ್ಲಿ ವರ್ಣಕ ಕಾವ್ಯಗಳು ಸೊಗಸಿನ ಪುಷ್ಪಗಳಾಗಿ ಅರಳತೊಡಗಿದುವು.

ನೋಡುವೊಡೊಂದಕ್ಕರಮುದು
ಮಾಡುವೊಡುಚ್ಚರಣೆಗರಿದು ಮೂಱುಂ ತೆಱನುಂ
ಕೂಡೆ ಕವಿತತಿ ವಿಚಾರಿಸ
ಬೇಡದಱಿಂ ಱಱ–ಕುಳ–ಕ್ಷಳಂಗಳನಿವಱಿಕೊಳ್

ಎಂಬ ಪದ್ಯದಲ್ಲಿ ಹರಿಹರನ ಧೀರತನದ ಹೊಸ ಹಾದಿ ಕಂಡುಬರುತ್ತಿದೆ. ಱಟ, ಕುಳ, ಕ್ಷಳಗಳ ತೊಡಕನ್ನು ತೊಡೆದು ಹಾಕಲು ಮುಂಬಂದ ಎದೆಗಾರನಿವನು. ರಗಳೆಗಳಲ್ಲಿ ಹೊಸ ರೀತಿಯ ಭಾಷೆಯನ್ನು ಅನುಸರಿಸಿ ಹರಿಹರನು ಕನ್ನಡ ಭಾಷೆಯ ಹೊಸ ಸ್ವರೂಪಕ್ಕೆ ಕಾರಣನಾಗಿದ್ದಾನೆ.

ಹರಿಹರನು ವೀರಶೈವರಲ್ಲಿ ಅಗ್ರಕವಿ; ಪೂಜ್ಯಕವಿ. ಪಂಪನಿಗೆ ಜೈನ ಕವಿಗಳು ತಮ್ಮ ಕಾವ್ಯಗಳಲ್ಲಿ ಸಲ್ಲಿಸಿದ ಗೌರವವನ್ನು ಈತನಿಗೆ ಮುಂದಿನ ವೀರಶೈವ ಕವಿಗಳು ಸಲ್ಲಿಸಿದ್ದಾರೆ. ಈತನು ವರ್ಣಕ ಕಾವ್ಯಸಂಪ್ರದಾಯದ ಆದಿಕವಿಯೂ ಆಗುಽದು.

ಹರಿಹರನು ಪಂಪಾಕ್ಷೇತ್ರದವನು. ದ್ವಾರಸಮುದ್ರದ ಅರಸರಲ್ಲಿ ಕರಣಿಕನಾಗಿದ್ದನು. ಮನುಜರ ಸೇವೆ ಬೇಡವೆನಿಸಿದ್ದರಿಂದ ಹಂಪೆಯಲ್ಲಿಯೇ ನೆಲಸಿ ಕಾವ್ಯ ರಚಿಸಿದನು. "ಉಭಯಕವಿಶರಭಭೇರುಂಡ" ನಾದ ರಾಘವಾಂಕನು ಈತನಿಗೆ ಸೋದರಳಿಯನೂ ಶಿಷ್ಯನೂ ಆಗಿದ್ದನು. ಇವರಿಬ್ಬರೂ ಕೆರೆಯಪದ್ಮರಸನೂ ಸಮಕಾಲೀನರೆಂದೂ ಅವರ ಕಾಲ ೧೧೬೫ ಎಂದೂ ಕವಿಚರಿತೆಕಾರರ ಹೇಳಿಕೆ. ಡಾ. ವೆಂಕಟಸುಬ್ಬಯ್ಯನವರು ಹರಿಹರನ ಕಾಲವನ್ನು ಒಂದು ಶತಮಾನ ಮುಂದೆ ಒಯ್ಯುತ್ತಾರೆ. ಗೋವಿಂದ ಪೈ ಅವರು ಕವಿಚರಿತ್ರಕಾರರ ಅಭಿಪ್ರಾಯವೇ ಸರಿಯೆಂದು ವಾದಿಸುತ್ತಿದ್ದಾರೆ. ಪ್ರೊ. ಕುಂದಣಗಾರ ಮತ್ತು ಮಾಳವಾಡರವರು ಹರಿಹರನ ಕಾಲ ೧೨೧೬ ಎಂದು ಸಾಧಿಸಲು ಯತ್ನಿಸಿದ್ದಾರೆ. ಬಸವಣ್ಣನವರು, ಅಲ್ಲಮಪ್ರಭು, ಅಕ್ಕಮಹಾದೇವಿ ಇವರನ್ನು ಕುರಿತು ರಗಳೆಗಳನ್ನು ರಚಿಸಿರುವುದರಿಂದ ಈ ಕವಿ ಅವರಿಂದ ಈಚೆಯವನೆಂದೂ, ಈತನ ಗಿರಿಜಾಕಲ್ಯಾಣದೊಳಗಿನ ಕೆಲ ಪದ್ಯಭಾಗಗಳು ಕೇಶಿರಾಜನ ಶಬ್ದಮಣಿ–

ಜೆಪರ್ಣಣದಲ್ಲಿ ಸಿಕ್ಕುವುದರಿಂದ ಆತನಿಗಿಂತ ಮೊದಲಿನವನೆಂದೂ ಸದ್ಯಕ್ಕೆ ಇಟ್ಟುಕೊಳ್ಳಬಹುದು.

ಈ ಕವಿಯು ಗಿರಿಜಾಕಲ್ಯಾಣ, ಪಂಪಾಶತಕ, ಮುಡಿಗೆಯ ಅಷ್ಟಕ, ರಕ್ಷಾಶತಕ ಎಂಬ ಗ್ರಂಥಗಳನ್ನು ಅಲ್ಲದೆ ನೂರಿಪ್ಪತ್ತು ಶಿವಶರಣರ ರಗಳೆಗಳನ್ನೂ ಬರೆದಿದ್ದಾನೆ.

ಹರಿಹರನು ಹಿರಿಯಕವಿ, ಭಕ್ತ, ಕ್ರಾಂತಿಪುರುಷ. ಈ ಮಹಾಕವಿಯ ಪಾಂಡಿತ್ಯದಿಂದೊಡಗೂಡಿದ ಪ್ರತಿಭೆ, ಈ ಶ್ರೇಷ್ಠಭಕ್ತನ ತಲ್ಲೀನತೆ, ಈ ಎದೆಗಾರ ಕ್ರಾಂತಿಪುರುಷನ ಭಾಷೆಯ ಇಂಪು, ಇವುಗಳ ಮುಪ್ಪುರಿಯು ಕನ್ನಡಿಗರಿಗೆ ಎಂದೂ ಬತ್ತದ ಸೊಗಸಿನ ಬುಗ್ಗೆಯಾಗಿದೆ.

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೮ | ೧೧ | ಜನನಿಗರ್ಭಾ೯ಂ | ಜನನೀಗರ್ಭಾ೯ಂ |
| ೧೬ | ೧೧ | ತರ್ಕ್ಯಾ೯ಂದಲೆಂ | ತರ್ಕ್ಯಾ೯ಂ ದಲೆಂ |
| ೩೧ | ೨೩ | ನಲವಿಂದೆಂದು | ನಲವಿಂದೆಂದುಂ |
| ೩೨ | ೩ | ಈಕ್ಷಣ | ರಕ್ಷಣ |
| ೩೨ | ೧೦ | ವಾದಿನೊಳೆ | ವಾದಿ ನೊಳೆ |

# ರಕ್ಷಾಶತಕಂ

ಶ್ರೀಮದ್‌ಗಂಗಾತರಂಗಾವೃತವಿಮಲಜಟಾಜೂಟ ಸರ್ವೇಶ ಗೌರೀ-
ವಾಮಾಂಗಾಲಿಂಗನಾಲಿಂಗಿತ ಘನಮಹಿಮೋದಾರಚಾರಿತ್ರ ಚಂಚತ್-
ಸೋಮಾರ್ಧೋತ್ತಂಸ ಸಂಸಾರಜಲಧಿವಡಬಾಕಾರಸಾಕಾರ ಭಕ್ತಿ-
ಪ್ರೇಮಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧

ತಿರುಗುತ್ತೆಂಬತ್ತು ನಾಲ್ಕುಂ ದಶಶತಶತಜನ್ಮಂಗಳೊಳ್ ಪುಟ್ಟಿ ನಿಮ್ಮೊಂ-
ದಿರವಂ ತಿಂತೆಂತುಟೆಂದೇನುಮನಱಿಯದೆ ಮಣ್ಣಾಗಿ ಕಲ್ಲಾಗುತುಂ ದು-
ರ್ಧರಗುಲ್ಮಂ ಭೂರಿಭೂಜಂ ಪುೞು ಖಗ-ಮೃಗವಾಗುತ್ತುಮೆಂತಕ್ಕೆ ಬಂದೆಂ
ನರಜನ್ಮಕ್ಕಯ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨

ಬಸಿಱೊಳ್ ಮಾಸೊತ್ತಿ ನೆತ್ತರ್ ಪಸರಿಸಿ ಕರುೞಿಂ ಸುತ್ತಿ ಮೂತ್ರಂ ಪುರೀಷಂ
ಮುಸುಕಿಟ್ಟೆಲ್ಲಂಗದೊಳ್ ಕೆತ್ತಿರಲುದರಶಿಖಿಜ್ವಾಲೆಯಿಂದತ್ತಮಿತ್ತಂ
ಕುಸಿಯುತ್ತುಂ ಪುಟ್ಟುವೊಂದುಜ್ಜುಗದೊಳೆ ಮರಣಾವಸ್ಥೆಯಂ ತಾಳ್ದಿ ಬಂದಾ-
ಯಸಮಂ ಚಿತ್ತಯಿಸ್ಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩

ಏನೆಂಬೆಂ ಬಾಲ್ಯದೊಳ್ ಮೇಲಱಿಯದೆ ಮಲದಿಂ ಮೂತ್ರದಿಂ ಶ್ಲೇಷ್ಮದಿಂ ತೋ-
ದಾನಾರೆಂದೇನುಮಂ ಭಾವಿಸದೆ ಬಧಿರನಂತಂಧನಂತಿರ್ದು ಮತ್ತಂ
ನಾನಾಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಱಿನಿನ್ನಾಱಿನಯ್ಯೋ
ಆನಂದಾಂಭೋಧಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ. ೪

ಪಿರಿದೊಂದಜ್ಞಾನದಿಂ ಯೌವನವಿಕಳತೆ ಮೈದೋಱಿ ಕಾಂತಾನಿವಾಸಾಂ-
ತರದೊಳ್ ಶ್ವಾನಂಗೆ ಹೇಹಂದಿಗೆ ಕಪಿಗೆಣೆಯಾಗಿರ್ದು ಬೇಳಾಗುತುಂ ತತ್-
ಕರಣಕ್ಕಾಳಾಗಿ ಹಾಳಾಗುತೆ ಬಱಿದೊಱಿವೋದೆಂ ಬಳಲ್ದಂ ಬಿಗುರ್ತೆಂ
ಮರುಳಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫

ಸ್ತ್ರೀಮಾತ್ರಂ ನೇತ್ರದತ್ತಲ್ ಸುಳಿದೊಡೆ ಮನವಿಭ್ರಾಗವಾಗುತ್ತೆ ತಾಪ-
ಸ್ತೋಮಂ ಕೈಮಿಱಿ ಲಜ್ಜಾರಸಮುಡುಗಿ ವಿವೇಕಂ ಕಳಲ್ದೋಡಿ ರಾಗಂ
ಕೈಮಿಕ್ಕಾನಾವನೇನೆಂದಱಿಯದ ತೆಱನಂ ಮಾಡುತಿರ್ದಪ್ಪುದಿಂತೀ
ಕಾಮಂ ಕಾಮಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬

ಏಪ್ಪೊಳ್ತುಂ ಗಾತ್ರಮಂ ಶೋಷಿಸುತೆ ಕರಣಮಂ ಕಂದಿಸುತ್ತುಂ ನಿರರ್ಥಂ
ತಾಪವ್ರಾತಕ್ಕೆ ಪಕ್ಕಾಗಿಸುತಮಳಗುಣಸ್ತೋಮಮಂ ಖಂಡಿಸುತ್ತುಂ
ಪಾಪಪ್ರಾರಂಭಕರ್ತೃತ್ವಮನೆನಗೆನಿಸಂ ಮಾಡುತಿರ್ದಪ್ಪುದಿಂತೀ
ಕೋಪಂ ಶಾಂತಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭

ಧನಮಂ ಸ್ತ್ರೀಪುತ್ರರಂ ಕೆಮ್ಮನೆ ಕಿಡುವ ಗೃಹಕ್ಷೇತ್ರಮಂ ಮಿತ್ರರಂ ವ-
ಸ್ತ್ರನಿಕಾಯಾಕಲ್ಪಮಂ ಮುಂತೆನಗೆನುತೆ ಕರಂ ಕಾಂಕ್ಷೆಯಿಂ ಕೂರ್ಮೆಯಿಂದೆ-
ಳ್ದನಿತುಂ ಪುಣ್ಯಕ್ಕೆ ಮಾಡಲ್ ಕುಡದೆ ಕಿಡಿಸುವೀ ಲೋಭಮಂ ದಾನಿ ನೀಂ ಭೇ-
ದನೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮

ದೇಹೋಹಂ ಎಂದು ಮಕ್ಕಳ್ ಮನೆ ಧನವಳಿಯಲ್ ಕಂದಿಸುತ್ತುರ್ಬಿವಾಶಾ-
ವ್ಯೂಹಕ್ಕಿಂಬಾಗಿಸುತ್ತುಂ ನೆನೆದು ಮಱುಗಿಸುತ್ತುಂ ಮುಸುಂಕಿರ್ದ ಮಿಥ್ಯಾ-
ಸ್ನೇಹಾರಂಭಾನುಕೂಲಂ ನುಡಿಗೆಡೆಗುಡದಿರ್ದಪ್ಪುದೊತ್ತಂಬದಿಂದೀ
ಮೋಹಂ ಮೋಹಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯

ಆದನೇನೆಂಬೆಂ ಗುಣವ್ರಾತಮನೆ ಪಱಿಯುತುಂ ವಿದ್ಯೆಯಂ ಖಂಡಿಸುತ್ತುಂ
ಕದಡುತ್ತುಂ ಚಿತ್ತಮಂ ಬುದ್ಧಿಯನುಱದಱೆಯುಟ್ಟುತ್ತೆ ಕಾಯ್ದಪ್ಪುದೆನ್ನೀ
ಮದಮಾತಂಗಂ ಮಹಾರೋಪಕ ನಿಜಚರಣಸ್ತಂಭದೊಳ್ ಕಟ್ಟಿ ಸೈತಿ-
ಟ್ಟು ದಯಾಂಭೋರಾಶಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೦

ಪರರೈಶ್ವರ್ಯಕ್ಕಸೂಯಂಗೊಳುತೆ ಪರರ ಬಲ್ಪಿಂಗೆ ಸಂತಾಪಿಸುತ್ತುಂ
ಪರರಿಂದಂ ಮಿಕ್ಕು ಬಾಳಲ್ ಬಯಸಿ ಕುದಿದು ಬೇಳಾಗಿ ಬೆಂಬೀಳುತಿರ್ದುಂ
ಪರಚಿಂತಾಕ್ಷೋಭೆಯಿಂ ಮತ್ಸರದೊಡನೆ ಕರಂ ಗಾಸಿಯಾದಪ್ಪೆನೀ ಮ-
ತ್ಸರಮಂ ತಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೧

ಮನವೆನ್ನಂ ದುರ್ವಿಕಾರಕ್ಕೆಳೆದಪುದು ಮನಂ ಮಾನಮಂ ಮುರ್ಗಿದತ್ತೀ
ಮನವಾಶಾವಹ್ನಿಯೊಳ್ ನೂಂಕಿದಪುದು ಮನವೀ ಮಾಯೆಯಂ ಬಿಟ್ಟು
ನಿಮ್ಮಂ
ನೆನೆಯಲ್ ತಾನೀಯದಯ್ಯೋ ಶಿವನೆ ಭವನೆ ಕಾರುಣ್ಯವಾರಾಶಿಯೆನ್ನೀ
ಮನಮಂ ಸಯ್ತಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೨

ಪ್ರತ್ಯಕ್ಷಂ ಸತ್ತು ಹೋಗುತ್ತಿದೆ ನರನಿಕರಂ ತಾನಿದಂ ಕಂಡು ಕಂಡುಂ
ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ ಕಾಮಿಪ್ಪ ಕೋಪಿಪ್ಪ ಲೋಭಿ-
ಪ್ಪತ್ಯಂತಂ ಗರ್ವಿಪೆನ್ನೀ ಮನಕೆ ಪರಮವೈರಾಗ್ಯಮಂ ಕೊಟ್ಟು ಸತ್ಯಂ
ಸತ್ಯಂ ಸತ್ಯಾತ್ಮ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೩

ಇನಿತುಂ ವೈರಾಗ್ಯದತ್ತಲ್ ನೆನೆಯದೆ ಮದದತ್ತಲ್ ಮಹಾಮೋಹದ
ತ್ತಲ್
ಧನದತ್ತಲ್ ಧಾನ್ಯದತ್ತಲ್ ಸತಿಸುತಪಿತರತ್ತಲ್ ಸದಾ ಲೋಭದತ್ತಲ್
ನೆನೆಯುತ್ತಿರ್ದಪ್ಪುದೆನ್ನೀ ಮನವಿದನೆಡೆಗೊಂಡಳ್ಕಱಿಂ ದೇವ ನೀನಿಂ-
ತೆನಿತುಂ ಶೀವಿರ್ದು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೪

ಸುವಿಚಾರಕ್ಕೊರ್ಮೆಯುಂ ಸೇರದು ನಡೆಯಿಪುದತ್ಯಾಗ್ರಹವ್ಯಾಪ್ತಿಯಿಂ ತಾ-
ನವಿಚಾರಕ್ಕೆಂದೊಡೆಂಟಂ ನಿಮಿರ್ವುದು ಬಯಲಂ ಭಾವಿಸುತ್ತಿರ್ಪುದಾ
ತ್ಮೋ-
ದ್ಭವಮೂಲಚ್ಛೇದನೋಪಾಯವನೆಣಿಸದು ಮದ್‌ಬುದ್ಧಿಯೀ ಬುದ್ಧಿಯಂ
ಶಂ-
ಭುವೆ ಸಂತಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೫

ಇನಿತುಂ ತಾನಲ್ಲದಾರಂ ಬಗೆಯದು ಮದಮಂ ಗರ್ವಮಂ ಕೂಡಿಕೊಂಡಿ-
ರ್ದೆನಿತುಂ ಮುಂಗಾಣದತ್ಯುದ್ಧತತರಮುಖಮಾಗಿರ್ಪುದೋರಂತೆ ವಿದ್ವ-
ಜ್ಜನಮಂ ಕೈಕೊಳ್ಳದೆನ್ನೀ ಮನದೊಡತಣಹಂಕಾರವಿಂತಿಂತಿದಂ ದೇ-
ವನೆ ನೀಂ ತಗ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೬

ಧನದೊಳ್ ಧಾನ್ಯಂಗಳೊಳ್ ಭೂಷಣನಿತತಿಗಳೊಳ್ ಪುತ್ರಸಂತಾನದೊಳ್
ಭೋ-
ಗನಿಕಾಯಭ್ರಾಂತಿಯೊಳ್ ಕಾಂತೆಯರ ತನುಸುಖಚ್ಛಾಯೆಯೊಳ್
ಮಾಯೆಯೊಳ್ ಸಿಂ-
ದೆನಸುಂ ನಟ್ಟಿರ್ದ ಮಚ್ಚಿತ್ತಮನಭವ ನಿಜಾಂಘ್ರಿದ್ವಯಧ್ಯಾನಸಾನಂ-
ದನಿವಾಸಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೭

ಓರಂತೀ ದೇಹಮಂ ರಕ್ಷಿಸುವತಿಭರದಿಂದುಳ್ಳುತೆತ್ತುಂ ಸತೇಜ-
ಕ್ಕಾರೇನಂ ಪೇಳ್ದೊಡಂ ಕೈಮುಗಿದು ಸುಗಿದು ಪೆರ್ಬಿಟ್ಟೆಯುಂ ಪೊತ್ತು
ಸಂಸಾ-
ರಾರಂಭಂಗೆಯ್ದು ದುಃಖಕ್ಕಲಸಿ ಮಱುಗಿ ನಿಮ್ಮಂಘ್ರಿಯುಂ ಪೊರ್ದಿದೆಂ ಸ-
ತ್ಕಾರಂಭಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೮

ಅವಿಚಾರಂ ಮಿಕ್ಕು ಲಾಭಂಬಡೆವತಿಭರದಿಂ ಸುತ್ತಿ ದೇಶಂಗಳೊಳ್ ವಿಂ-
ಧ್ಯವಿತಾನಪ್ರಾಂತದೊಳ್ ತಿಱನೆ ತಿರುಗಿ ಮೊಡಲ್‌ಗೆಟ್ಟು ಬೆಂಬಿಳ್ದು
ಱ ದುಃಖ-
ವ್ಯವಹಾರಕ್ಕಳ್ಕಿ ನಿಮ್ಮಾ ಚರಣಯುಗಳಮಂ ಪೊರ್ದಿದೆಂ ಭಕ್ತವೃಂದೋ-
ತ್ಸವಕಲ್ಲೋಲೀರ್ವಿಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೯

ಅವನಿಂತಾರಾದೊಡಂ ಪಲ್ಗಿರಿದು ಪಿರಿದು ಬಾಯಿಂದೆ ದೈನ್ಯಾಕ್ಷರಂ ಸಂ-
ಭವಿಸುತ್ತೆನ್ನಾಳ್ದ ಸಂದೇಶಮನೆ ಕರುಣೆಸೆಂದಲ್ಲಿ ಮರ್ತ್ಯಂಗೆ ಸಾವು-
ತ್ತವೆ ಪುಟ್ಟುತ್ತಿರ್ಪ ಸೇವಾನರಕನದಿಯನೀಸಾಡಿ ಮದ್ಭಾಗ್ಯದಿಂ ನಿ-
ನ್ನವನಾದೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೦

ತನುವಂ ಸ್ತ್ರೀಪುತ್ರರಂ ರಕ್ಷಿಪ ವಿಪುಳತೆಕೈಕೊಂಡು ಕಾರ್ಪಣ್ಯವಕ್ತ್ರಂ
ತನುಗಾತ್ರಂ ದೀನನೇತ್ರಂ ತುಷಲಘುತರಮಾತ್ರಂ ಕರಂ ಪೊರ್ದಿ ತೋರ್ಪಿಂ
ಜನಮಂ ಬೇಳ್ಪಾಸೆಯಿಂ ಸಾವಿನ ಪರಿಯೆನಿಪೀ ದೈನ್ಯಮಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೧

ಮನೆಯಿಂದುಂ ಮಕ್ಕಳಿಂದುಂ ಜನನಿಜನಕರಿಂದುಂ ವೃಥಾ ಪತ್ನಿಯಿಂದುಂ
ಧನಮೆಂದುಂ ಧಾನ್ಯಮೆಂದುಂ ಸಕಲವಿಷಯಮಿಂತೆನ್ನದೆಂದುಂ ನಿರರ್ಥಾ-
ರ್ಥನಿಮಿತ್ತಂ ಬೆಂದು ತಾಪತ್ರಯದೊಳೆ ಕುದಿದೆಂ ಬತ್ತಿದೆಂ ಬಾಡಿದೆಂ ಯಾ-
ತನೆಗೊಂಡೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೨

ವಿಪುಳಾನಂಗಾಗ್ನಿಯಿಂ ಬಂದೆಳೆದುರವಣೆಪಾಶಾಗ್ನಿಯಿಂದಂ ನಿರರ್ಥಂ
ಕುಪಿತೋದ್ಭೂತಾಗ್ನಿಯಿಂದಂ ಹರಹರ ಮಿಗೆ ಬೇವುತ್ತುಮಿರ್ದಪ್ಪೆನಾನಂ-
ದಪಯೋವಾರಾಶಿ ನಿಮ್ಮಾ ವಿಮಳಕರತಳಾಬ್ಜಂಗಳಿಂದೆತ್ತು ತಯ್ಯೋ
ಕೃಪೆಯಿಂದಂ ನೋಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೩

ನವೆದೆಂ ರೋಗಂಗಳಿಂದಂ ಸೆಡೆದೆನನುದಿನಂ ಸೇವೆಯಿಂದಂ ನಿರರ್ಥಂ
ಸವೆದೆಂ ಕಾಮಂಗಳಿಂದಂ ಮಿಗೆ ಪರಿಭವದೊಳ್ ಬಂದೆ ನಾನಾಸೆಯಿಂದಂ
ತವಿಲಾದೆಂ ಕೋಪದಿಂದಳ್ಕಿದೆನತಿಮದದಿಂ ಮುಂದುಗೆಟ್ಟಿರ್ದಪೆಂ ಶಂ-
ಭುವೆ ನೀಲಗ್ರೀವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೪

ಅಯ್ಯೋ ಸಂಸಾರಸಂಗಕ್ಕೞಿಯದೆೞಗಿದೆಂ ಮಳ್ಗಿದೆಂ ಮಾಱುವೋದೆಂ
ಮುಯ್ಯಾಂತೆಂ ಮುಂದುಗೆಟ್ಟೆಂ ಸೆಡೆದೆನುಡುಗಿದೆಂ ಮಾಸಿದೆಂ ಸೂಸಿದೆಂ ಕಿ-
ರ್ಗಯ್ಯಾದೆಂ ಕಂದಿದೆಂ ಕುಂದಿದೆನಲಸಿದೆನಾಸತ್ತೆನಲ್ಲಾಡಿದೆಂ ನೀ-
ನಯ್ಯಾ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೫

ಉರಗಾಸ್ಯಾಲಗ್ನಭಗ್ನಪ್ರಚಲಿತಹರಿವೊಲ್ ವ್ಯಾಘ್ರವಕ್ತ್ರಪ್ರಯುಕ್ತ-
ಸ್ಫುರಿತಾತಂಕಾಂತರಂಗಸ್ಥಿತಮೃಗಶಿಶುವೊಲ್ ಸಿಂಹಹಸ್ತಾವಲಂಬ-
ದ್ವಿರದಂಬೋಲಿರ್ದನೀ ಮಾಯೆಯ ಮುಖದೆಡೆಯೊಳ್ ಬೇಗದಿಂ ಪಿಂಗಿಸಾ
ನುದ್-
ಗುರುವೇ ಮತ್ಸ್ವಾಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೬

ಲಲನಾಸಂಭೋಗರೋಗಂ ಪಸಿವನುಡುಗಿಸುತ್ತಾರ್ತಿಯಂ ಪೊಂಗಿಸುತ್ತುಂ
ಬಲಮಂ ಕೈಗುಂದಿಸುತ್ತುಂ ಸುಜನವಚನಪಥ್ಯಕ್ಕೆ ತಾಂ ವಕ್ರಿಸುತ್ತುಂ
ಸಲೆ ಲಜ್ಜಾಭಾವಮಂ ಮೀಱಿಸುತುಮಿದೆಯಿದಕ್ಕೌಷಧಂಗೊಟ್ಟು ತಂದೇ
ತಲೆಯೊಳ್ ಕೈಯಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೭

ದ್ವಿರದಂ ಮತ್ಸ್ಯಂ ಪತಂಗಂ ಭ್ರಮರನಹಿಯೆನಿಪ್ಪಿಂತಿವೇಕೇಂದ್ರಿಯಾರ್ಥಂ
ತಿರುಗುತ್ತಿರ್ದಪ್ಪುವಿಂತೀ ಜನನದ ಬಳಿಯೊಳ್ ದೇವ ಪಂಚೇಂದ್ರಿಯಾರ್ಥಂ
ವಿರಸಂ ವಿದ್ರೂಪಿ ಮೂರ್ಖಂ ವಿಷಯವಿಕಳನೇನಪ್ಪೆನೆಂತಿರ್ಪೆನಯ್ಯೋ
ಕರುಣೇ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೮

ತರದಿಂ ರೋಗಂ ವಿಷಂ ವೃಶ್ಚಿಕವನಲನಹಿವ್ಯಾಘ್ರಮುಗ್ರಾಯುಧಂಗಳ್
ದುರಿತಂ ಮತ್ತದ್ವಿಪಂ ಮೂರ್ಖತೆ ಪೊಡೆವ ಸಿಡಿಲ್ ದುರ್ಜನಂ
ದುರ್ಮದಂ ತ-
ಸ್ಕರರೆಂಬೀ ಕಂಟಕಸ್ತೋಮದ ನಡುವೊಡಲಿರ್ಪಂದವೇಂ ಸೋಜಿಗಂ ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೨೯

ಧನಮಂ ಸೈತಾರ್ಜಿಪೆಂ ಬೈತಿಡುವೆನದಱೊಳಂ ಪುಣ್ಯವೈವಾಹಮಂ ಮಾ-
ಳ್ಪೆನದಂ ಪುತ್ರರ್ಗಲಂಕಾರಮನೊದವಿಸುವೆಂ ಕೂಡಿ ಭೋಗಿಪ್ಪೆನೆಂದಾಂ
ನೆನೆಯುತ್ತಿರ್ಪನ್ನೆಗಂ ತೊಟ್ಟನೆ ಮರಣಮುದಾಗಲ್ಕೆ ಬೇಳಪ್ಪ ದುಶ್ಚಿಂ-
ತನೆಯಂ ತಗ್ಗೊತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೦

ಕನಕಂ ನೀರಕ್ಕರಂ ಪೆಂಡಿತಿ ಕನಸು ಸುತರ್ ಮಂಜು ತಾಯ್ತಂದೆ ವಾಯಂ
ತನುವಭ್ರಚ್ಛಾಯೆ ಮಿತ್ರರ್ ಗಗನಕುಸುಮಮಿಷ್ಟರ್ ಮರೀಚೀಜಲಂ ಯೌ-
ವನಧರ್ಮಂ ಮೇಘಚಾಪಂ ಗೃಹವಚಿರವೆನಿಪ್ಪಿಂತಿವಂ ಬಿಟ್ಟು ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೧

ಎರವೀ ದೇಹಂ ಹಿರಣ್ಯಂ ಪುದು ಸತಿ ಪಗೆಯಾತ್ಮೇಷ್ಟರೌಪಾಧಿಕರ್ ಸೋ-
ದರರೆಲ್ಲಂ ವೈರಿಗಳ್ ತಾವೆನಿಪಿದನಱಿದುಂ ಮತ್ತಮಾವರ್ಥದಿಂದಂ
ಪೊರೆವೆಂ ರಕ್ಷಿಪ್ಪೆನೊಲ್ವೆಂ ಬಿಡದೆ ನಡೆಯಿಪೆಂ ನಂಬಿ ನಚ್ಚಿರ್ಪೆನೆನ್ನಿಂ
ಮರುಳಾರಾರಾನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೨

ಜಲಮಂ ಪೊರ್ದಿರ್ಪ ಶೈವಾಲದ ತೆಱದೆ ಕರಂ ದೀಪಿಕಾಚ್ಛಾಯೆಯೆಂತು-
ಜ್ಜ್ವಲವಾಂತಾ ಚಂದ್ರಲಕ್ಷಂ ಮುಕುರದೊಳಗೆ ತೋರ್ಪಾ ಪ್ರತಿಚ್ಛಾಯೆಯೆಂತಂ-
ತಲೆಯುತ್ತುಂ ಪತ್ತಿ ಬೆನ್ನಂ ಬಿಡದಿದೆ ಘನಸಂಸಾರವೀ ಮಾಯೆಯಂ ನಿ-
ರ್ಮಲ ನೀನೇ ತೀರ್ಚಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೩

ನೆಳಲೊಳ್ ಪೋರ್ವಂತಿರಾಕಾಶಮನವಯವದಿಂದೀಸುವಂತುರ್ವಿಯಂ ತಾಂ
ತೊಳೆವಂತಭ್ರಾಳಿಯಂ ಕಂಡರಿಸುವ ತೆಱದಿಂ ಧೂಮಮಂ ಸೀಳ್ವ ಪಾಂಗಿಂ
ಬಳಲುತ್ತಿರ್ದಪ್ಪೆನೀ ಮಾಯೆಯ ಮನೆಯ ಮವಾಳಿಂದೆ ನಿರ್ಮಾಯ ನಿತ್ಯೋ-
ಜ್ಜ್ವಳ ನಿಸ್ತ್ರೈಗುಣ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೪

ಮದದಿಂದಂ ಪೊಳ್ತು ಪೋಗುತ್ತಿದೆ ಶಿವಶಿವ ಮಾತ್ಸರ್ಯದಿಂ ಪೊಳ್ತು ಪೋಗು-
ತ್ತಿದೆ ಆಹಾ ಪೊಳ್ತು ಪೋಗುತ್ತಿದೆ ಮುಸುಕಿದ ತತ್ಕಾಮದಿಂ ಪೊಳ್ತು ಪೋಗು-
ತ್ತಿದೆ ಲೋಭವ್ಯಾಪ್ತಿಯಿಂ ಕೋಪದಿನಱಿಯದೆ ದುರ್ಮೋಹದಿಂ ಪೊಳ್ತು ಪೋಗು-
ತ್ತಿದೆ ತಂದೇ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೫

ಎರೆದೇವೆಂ ಪೊರ್ದಿಯೇವೆಂ ನಿರುತದೆ ನೆನೆದೇವೆಂ ಮನಂ ಮುಟ್ಟಿಯೇವೆಂ
ಕರೆದೇವೆಂ ಕೂರ್ತುಮೇವೆಂ ಬಿಡದತಿಭರದಿಂ ನಂಬಿಯೇವೆಂ ಶಿವಾ ಮದ್-
ಗುರುವೇ ಇನ್ನೇವೆನೇವೆಂ ನಿಜಕರುಣವಣಂ ಪೊರ್ದದಸ್ಪೃಶ್ಯನಂ ಶಂ-
ಕರ ನೀಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೬

ತವೆ ರೋಗಂ ಪತ್ತಿ ಗಾತ್ರಂ ಧರಣಿಗೆ ಕೆಡೆದಿರ್ಪಲ್ಲಿಯುಗ್ರದ್ವಿಪಂ ಬಂ-
ದವಿಚಾರಂ ಕಾಯ್ದು ಬಲ್ಪಿಂದೊದೆಯೆ ಮುಡುಡಿ ಬೀಳ್ವಲ್ಲಿ ಕಾಳ್ಕಿಚ್ಚು ಸುತ್ತಂ
ಕವಿತಂದಾ ಪೊಳ್ತು ನಾಲ್ಕುಂ ದೆಸೆಗೆ ಪರಿದು ಬೇವಲ್ಲಿ ನೀವಲ್ಲದಾರ್ ಕಾ-
ವವರಿಂ ಕಾಮಾರಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೭

ಎಡೆಗೊಂಡೀ ಮುಪ್ಪುದೋಱಲ್ ನೆರೆ ನೆಗೆದು ಸಿರಂಡೂಗಿ ಬೆನ್ ಬಾಗಿಯೆಂತ-
ಕ್ಕಡಿಯೆತ್ತಲ್ಕಾಱದೆತ್ತಂ ದಡದಡಿಸಿ ಕರಂ ಜೋಲ್ದು ಕೋಲೂಱಿ ನಿಂದುಂ
ನಡುಗುತ್ತುಂ ಕೆಮ್ಮಿ ಕೆಮ್ಮುತ್ತೊಡಲನೊಲೆಯುತುಂ ಮುಗ್ಗಿ ಬಳ್ದುಂ ನಿತಾಂತಂ
ಕೆಡೆವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೮

ತೆಱಪಿಲ್ಲಂ ಸಾವು ಭೋಂಕೆಂದಡಸಿದ ಪದದೊಳ್ ಭಕ್ತಿಸಂಧಾನವೆಲ್ಲಿ-
ತ್ತಱಿವೆಲ್ಲಿತ್ತರ್ಥವೆಲ್ಲಿತ್ತಮಳಗುಣವದೆಲ್ಲಿತ್ತೊ ಸದ್ಧರ್ಮವೆಲ್ಲಿ-
ತ್ತೊಱಪೆಲ್ಲಿತ್ತೋಜೆಯೆಲ್ಲಿತ್ತತುಳಬಲಮದೆಲ್ಲಿತ್ತದಕ್ಕಂಜಿ ನಿಮ್ಮಂ
ಮಱೆವೊಕ್ಕೆಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೩೯

ಕಿವಿಕಣ್ಗಳ್ ಕೆತ್ತು ಬಾಯೊರ್ಗುಡಿಸಿ ಕರೆಯೆ ಪೆರ್ಗೂರಿಡುತ್ತೆಯ್ದೆ ಬಂದಿ-
ರ್ದವರಂಜಲ್ ಶ್ವಾಸಮೇಱುತ್ತಿ ಳಿಯುತುಮಿರೆಯುಂತಲ್ಲಿ ಕೈಕಾಲ್ಗಳೊಳ್
ಜೀ-
ವವನಂಟಂಟಲ್ಲಿಯುಂ ಕಾಣದೆಯಕಟಕಟಯ್ಯೋ ಗಡಾ ಸತ್ತನೆಂಬೀ
ಪವಣಿಂದಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೦

ದೇವಾ ನಾನೇವೆನೆಂದೆಂದಬಲೆಯಳುತೆ ತಾಂ ಪೋಗೆ ಪಿಂದಂ ಜನಂಗಳ್
ಸಾವೀತಂಗಾಯ್ತೆನುತ್ತುಂ ಮಱುಗಿ ಬರೆ ತನೂಜಾಳಿಯುಂ ಬಂಧುವರ್ಗಂ
ತಾವೆತ್ತಂ ಮತ್ತೆ ಶೋಕಂ ಮುಸುಕಿ ನಡೆಯೆ ತತ್ಕಷ್ಟದೊಳ್ ಕಾಷ್ಠರೂಪಿಂ
ಬೇವಲ್ಲಿಂ ಮುನ್ನ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೧

ಜನನಿ ಗರ್ಭಾಂಡದಿಂ ಬರ್ಪತಿವಿಷಮತರಕ್ಲೇಶಮಂ ಬಾಲ್ಯದೊಳ್ ಮಾ-
ಳ್ಪ ನಿಷೇಧವ್ರಾತಮಂ ಯೌವನವಿಕಳತೆಯಂ ಮುಪ್ಪಿನಾ ಹೇಯಮಂ ಸಾ-
ವ ನಿರೋಧಸ್ತೋಮಮಂ ಕಂಡಲಸಿದೆನದಿರ್ದಂ ಪೇಸಿದೆಂ ನೊಂದೆನೋರಂ-
ತನುಗೆಟ್ಟಿಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೨

ಆನೆಂತೆಂತಕ್ಕೆ ಬಂದೆಂ ಮನುಜಭವದೊಳೆಂತಕ್ಕನೂನಾಂಗಸಂಗಂ
ತಾನಾಯ್ತೇತಕ್ಕೆ ಕೂಡಿತ್ತಘಟಿತಘಟಿತಂ ಸತ್ಕುಲಂ ಮತ್ತಮೆಂತ-
ಕ್ಕಾ ನಿಮ್ಮಂಘ್ರಿದ್ವಯಕ್ಕಾನೆಱಗಿದೆನಿನಿತಾಯಾಸದಿಂ ಬಂದೆನಯ್ ಸ-
ತ್ಯಾನಂದಜ್ಯೋತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೩

ಶರಣಾರ್ ನೀಂ ಕಾವರಾರ್ ನೀಂ ಗತಿ–ಮತಿ–ಪತಿಯಾರ್ ನೀಂ ಕೃಪಾಂಭೋ
ಧಿಯಾರ್ ನೀಂ
ಗುರುವಾರ್ ನೀಂ ಗೋತ್ರವಾರ್ ನೀಂ ಜನನಿಜನಕರಾರ್ ನೀಂ ಮಹಾ
ಬಂಧುವಾರ್ ನೀಂ
ಪರರಾರ್ ನೀಂ ವಂದ್ಯರಾರ್ ನೀನೆನಗತಿಹಿತರಾರ್ ನೀಂ ಮಹಾದೇವ
ನಿನ್ನಿಂ
ಪರರಾರಾರ್ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೪

ಮರುಳಾರಾಂ ಮತ್ತನಾರಾಂ ಮತಿವಿರಹಿತನಾರಾಂ ಬುಧದ್ವೇಷಿಯಾರಾಂ
ಪರನಾರಾಂ ಕರ್ಮಿಯಾರಾಂ ಖಲಜನಸಖನಾರಾಂ ಸದಾಕ್ರೂರವಾಕ್ಪಾ-
ಪರನಾರಾಂ ನೀಚನಾರಾಂ ವಿಷಯವಿಕಳನಾರಾಂ ಮಹಾಕ್ಷುದ್ರರೆನ್ನಿಂ
ಪರರಾರಾರಾನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೫

ಗುರು ನೀಂ ತ್ವಚ್ಛಿಷ್ಯನಾಂ ನಿರ್ಮಳಘನನಿಧಿ ನೀಂ ಕ್ಷುದ್ರನಾಂ ದಾನಿ ನೀನಾ-
ತುರನಾಂ ನಿಷ್ಕಾಮಿ ನೀಂ ಕಾಮುದ ನೆಲೆವನೆಯಾಂ ತಂದೆ ನೀಂ ಪುತ್ರನಾಂ ಶಾಂ-
ತರಸಂ ನೀಂ ಕ್ರೋಧಿಯಾಂ ಪುಣ್ಯದ ಫಲತತಿ ನೀಂ ಪಾಪಿಯಾಂ ಸ್ವಾಮಿ ನೀಂ ಕಿಂ-
ಕರನಾಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೬

ಖಳನಂ ದುರ್ಬೋಧನಂ ದುರ್ವಿಷಯನಿರತನಂ ದುಷ್ಟನಂ ಧೂರ್ತನಂ ದುರ್-
ಬಳನಂ ದುರ್ಮೋಹಿಯಂ ದುರ್ಜನಜನಹಿತನಂ ಸಜ್ಜನದ್ವೇಷಿಯಂ ಸಂ-
ಚಳನಂ ದೋಷಾರ್ತಿಯಂ ದುರ್ಧರತರವಿರಸಕ್ರೀಡನಂ ಕೋಪಿಯಂ ವ್ಯಾ-
ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೭

ಅಳಿಪಂ ಸನ್ಮಾನಹೀನಂ ಸುಜನಜನವಿದೂರಂ ವೃಥೋತ್ಸಾಹಿ ಮೂರ್ಖಂ
ಖಳನತ್ಯಾಸ್ವಾದಿ ವಿದ್ಯಾವಿನಯನಯವಿಹೀನಂ ಕುಜಾತಿಪ್ರಸಂಗಂ
ಗಳಪಂ ಚಾರ್ವಾಕನಜ್ಞಂ ಗುಣರಹಿತನೆನಿಪ್ಪೆನ್ನನೊಲ್ದೀಶ ನೀಂ ವ್ಯಾ-
ಕುಳನಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೮

ಸತತಂ ನಿಂದಾಕರಂ ನಿಷ್ಠುರನತಿಕೃಪಣಂ ಸಜ್ಜನದ್ವೇಷಿ ದುಶ್ಚಿಂ-
ತಿತಚಿತ್ತಂ ಜ್ಞಾನದೂರಂ ಪರಹಿತರಹಿತಂ ಭಕ್ತಿವಿಶ್ವಾಸಹೀನಂ
ಸ್ತುತಿಲೋಲಂ ರಾಗಶೀಲಂ ಸುಕೃತವಿಮುಖನಾನಂದಹೀನಂ ವಿಮಾನಂ
ನತಕಲ್ಪೋರ್ವೀಜ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೪೯

ಅತಿದೀನಂ ಧೂರ್ತಮಾನಂ ಪರಧನವನಿತಾಧೀನನಾನಂದಹೀನಂ
ಮತಿಶೂನ್ಯಂ ಡಂಭಮಾನ್ಯಂ ವಿಷಯವಿಸರದನ್ಯಂ ವಿಮೂಢರ್ಗನನ್ಯಂ
ನುತದೂರಂ ದುಃಖಸಾರಂ ಸುಜನಜನಘನಕ್ರೂರನೀ ಭೂಮಿಭಾರಂ
ಸತತಂ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೦

ಖರರೂಪಂ ಪಾಪದೀಪಂ ಕುಜನಜನಕಲಾಪಂ ಸದಾರಬ್ಧಕೋಪಂ
ಸ್ಥಿರಭಂಗಂ ದುಷ್ಪ್ರಸಂಗಂ ವಿಷಯಕುಸುಮಭೃಂಗಂ ದುರಾಶಾಂತರಂಗಂ
ವರಧೂರ್ತಂ ದಂಭಕಾರ್ತಂ ಖಳಜನಸಲಿಲಾವರ್ತನಜ್ಞಾನಗರ್ತಂ
ಕರುಣೀ ಕೈಕೊಂಡು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೧

ಘನವೆನ್ನೊಳ್ ಮಾಣದೀ ಕಾಮದ ವಿಕಳತೆಯೀ ಕ್ರೋಧವೀ ಲೋಭವೀ
ದುರ್-
ಮನವೀ ದುಶ್ಚಿಂತೆಯೀ ದುರ್ಮದದ ಮಮತೆಯೀ ಮೋಹವೀಯಾಸೆಯೀ
ದುರ್-
ಜನಸಂಗಪ್ರೇಮವೀ ಮತ್ಸರದ ಮಸಕವೀ ದುಃಖಸಂಸ್ತೋಮವುಂ ಛೇ-
ದನೆಯಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೨

ಸಲೆ ಮಾಯಾಮೋಹವಾಚ್ಛಾದಿಸೆ ನೆಱೆ ಧೃತಿಗೆಟ್ಟಂ ವೃಥಾ ಧಾತುಗೆಟ್ಟಂ
ಪೊಲಗೆಟ್ಟಂ ಮುಂದುಗೆಟ್ಟಂ ನೆನೆಯದೆ ಮತಿಗೆಟ್ಟಂ ಕರಂ ಬುದ್ಧಿಗೆಟ್ಟಂ
ನೆಲೆಗೆಟ್ಟಂ ನೀತಿಗೆಟ್ಟಂ ಮಱೆದು ಮಿಗೆ ಮನಂಗೆಟ್ಟೆನಾನುರ್ಬುಗೆಟ್ಟಂ
ತಲೆಗೆಟ್ಟಂ ತಂದೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೩

ನೆನೆವಂ ಸ್ವಪ್ನೋಪಮಸ್ಮಾರಕುವಿಷಯದ ಸಂಯೋಗಮಂ ಭೋಗಮಂ
ಕೆ-
ಮ್ಮನೆ ನಿಮ್ಮ ಭಕ್ತಿಯೊಂದಂ ನೆನೆಯೆನೊಸೆದು ಸತ್ಯತ್ವ-ನಿತ್ಯತ್ವಮಂ
ಯಾ-
ತನೆಗೊಂಡರ್ಥಾರ್ಥದಿಂದನ್ಯರನನುದಿನಮೋರಂತೆ ಬೋಧಿರ್ಪ ದುರ್ಬೋ-
ಧನನಯ್ಯೋ ನೋಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೪

ಏಕೆನ್ನಂ ನೋಡದಯ್ಯೋ ಭವ ಭವ ಭವದೊಳ್ ತಂದೆ ಚಂದ್ರಾವತಂಸಾ
ಏಕೆನ್ನಂ ಮಾಯೆಯಿಂದಂ ಶಿವ ಶಿವ ಶಿವ ಬೆಳ್ಮಾಡುತಿರ್ದಪ್ಪೆ ಈಶಾ
ಏಕೆನ್ನಂ ಕಾಲನಿಂದಂ ಹರ ಹರ ಹರ ನೀಂ ಕಾಡುತಿರ್ದಪ್ಪೆ ದೇವಾ
ಲೋಕೈಕಾರಾಧ್ಯ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೫

ಭವವೇಕಾನೇಕೆ ಸತ್ವಾದಿಗುಣದ ಪುದುವಾಳೇಕದಾನೇಕೆ ಕಾಮೋ-
ತ್ಸವವೇಕಾನೇಕೆ ತಾಪತ್ರಿತಯದ ಪೊಡೆಗಿರ್ಚೇಕದಾನೇಕೆ ಕೋಪೋ-
ದ್ಭವವೇಕಾನೇಕೆ ಕರ್ಮದ್ವಯದ ಕಡುದೊಡಂಕೇಕದಾನೇಕೆ ದೇವಾ
ಭವಕರ್ಮಧ್ವಂಸಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೬

ಅದು ಸಂಸಾರಾಬ್ಧಿಯಂ ದಾಂಟಿಸುವುದದು ದುರಾಚಾರ-ದುರ್ಬುದ್ಧಿಯಂ ಕೀ-
ಳ್ವುದು ನಿತ್ಯಂ ಶ್ರೀಗುರುಶ್ರೀಪದಸರಸಿಜಮಂ ತೋರ್ಪುದಾಹಾ ಬಳಿಕ್ಕಂ-
ತದು ಲಿಂಗಾರೂಢನಂ ಮಾಡುವುದು ಶರಣಸಾಂಗತ್ಯವಾ ಸಂಗಮಂ ಪಿಂ-
ಗದವೋಲ್ ನೀಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೭

ಹರಭಕ್ತರ್ ಬಂದೊಡುರ್ಬುತ್ತವರ ಚರಣಮಂ ಕಣ್ಗಳೊಳ್ ಕಂಠದೊಳ್ ಪೇ-
ರುರದೊಳ್ ಭಾಳಾಗ್ರದೊಳ್ ದೋರ್ಯುಗದೊಳುಭಯಗಂಡಂಗಳೊಳ್ ತಾಳ್ದುಮುತ್ತು-
ತ್ತೊರೆಯುತ್ತಪ್ಪುತ್ತೆ ಹಿಗ್ಗುತ್ತ ತುಳಸುಖದೊಳಾಳುತ್ತು ಮೇಳುತ್ತೆ ಬಾಳ್ದ-
ಪ್ಪಿರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೮

ಮೃಡಭಕ್ತವ್ರಾತವಾನಂದದೊಳಿದಿರ್ವರೆ ಕಂಡಾರ್ತದಿಂ ಸ್ನೇಹದಿಂ ಸೈ-
ಗೆಡೆದೆನ್ನೈಶ್ವರ್ಯವೆನ್ನಾಗಿನ ತವನಿಧಿವೆನ್ನಾಯುವೆನ್ನೆಲ್ಲಮುಂ ನಿ-
ಮ್ಮಡಿಗಳ್ ಸರ್ವಸ್ವಮುಂ ನಿಮ್ಮಡಿಗಳೊಡವೆಯಾಂ ಕಾಪಿನಾಳೆಂದು ಚಿತ್ತಂ-
ಗುಡುತಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೯

ಮುದದಿಂದಂ ನಿಮ್ಮ ಪೂಜಾರಚನೆಯನೊಲವಿಂ ಕಂಡು ಸರ್ವಜ್ಞನಿಂತೊ-
ಪ್ಪಿದನಾನಂದಾಬ್ಧಿಯಿಂತೊಪ್ಪಿದನಹಿಧರನಿಂತೊಪ್ಪಿದಂ ಶಂಭುವಿಂತೊ-
ಪ್ಪಿದನೆಂದಶ್ರುಪ್ರವಾಹಂ ಪರಿಯಿಡೆ ಪುಳಕಂ ಪೊಣ್ಮೆ ಸಂಸ್ತೋತ್ರಮಂ ಪಾ-
ಳ್ಪಿದನೆನ್ನೊಳ್ ಕೂಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೦

ಅದನಿನ್ನೇನೆಂಬೆನಾಹಾ ಗುರುತರಸುಖಮಂ ತುಂಗಭದ್ರಾನದೀತೀ-
ರದೊಳಿರ್ದುತ್ತುಂಗಹಸ್ತಂ ಮುಕುಲಿತನಯನಂ ಭೂತಿಸರ್ವಾಂಗನಾಗಿ-
ರ್ದು ದಯಾಂಭೋರಾಶಿ ಗಂಗಾಧರ ಪುರಹರ ಸರ್ವೇಶನೆಂದುರ್ಬುವಾ ಸೌ-
ಖ್ಯದ ಪೆರ್ಚಂ ಕೊಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೧

ಎನಗಿನ್ನೆಂತೆಂಬ ಚಿಂತಾಪ್ರತತಿ ಹಱಿದು ಹಾಱಿತ್ತು ಕಾಮಕ್ಕೆ ಮೋಹ-
ಕ್ಕನುಗೆಯ್ವೊಂದಾಗ್ರಹಂ ಕಟ್ಟನೆ ಕರಗಿತು ಮಾತ್ಸರ್ಯದೊಂದುಜ್ಜುಗಂ ಕ-
ಱನೆ ಕಂದಿತ್ತತ್ತಮಿತ್ತಂ ಮಿಗೆ ಮಸಗುವ ಕೋಪಂ ಕರಂ ತಗ್ಗಿ ಕುಗ್ಗಿ-
ತ್ತನಿಪಂದಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೨

ತಳಿರಿಂ ಪೂವಿಂ ಫಲವ್ರಾತದಿನೊಱಗುವ ಚೂತವ್ರಜಚ್ಛಾಯೆಯೊಳ್ ಕೋ-
ಮಳಹಂಸಸ್ತೋಮವಾಮಭ್ರಮರಕುಳವಿಕಾಸಾಬ್ಜಕಾಸಾರದೊಳ್ ನಿ-
ರ್ಮಳನಿಸ್ಪಂದಪ್ರಕಾಶಸ್ಥಳದೊಳಮಳಲಿಂಗಾರ್ಚನಾಸಕ್ತಚಿತ್ತೋ-
ಜ್ಜ್ವಳನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೩

ಅತುಳಸ್ವಚ್ಛಾಂಬುವಿಂ ಮಜ್ಜನಕೆಱೆದು ನವೀನಪ್ರಸೂನಪ್ರತಾನ-
ದ್ಯುತಿ ಸುತ್ತಲ್ ಸುತ್ತಿ ನಿಮ್ಮಂ ಸವಿನುಡಿ ಕವಿಯಲ್ ಬಣ್ಣಿಸುತ್ತಶ್ರು ವಿಱಿಲ್
ನುತರೋಮಾಂಚಂಗಳೇಳಲ್ ಬೆಮರ್ವನಿ ನೆಗೆಯಲ್ ಗದ್ಗದಂ ಪೊಣ್ಮೆ ಪೂಜಾ-
ತತಿಯಂ ಮಾಳ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೪

ನೆನೆಯುತ್ತುಂ ಪೂಜಿಸುತ್ತುಂ ಚರಣದೊಳಲರುತ್ತುಂ ಮರಲ್ದೀಕ್ಷಿಸುತ್ತುಂ
ಮುನಿಯುತ್ತುಂ ಮುದ್ದಿಸುತ್ತುಂ ತೊನೆದು ತವಕಿಸುತ್ತುರ್ವುತುಂ
ಗರ್ವಿಸುತ್ತುಂ
ಜಿನುಗುತ್ತುಂ ಜೀವಿಸುತ್ತುಂ ಥಿಣಥಿಣರವದಿಂದಾಡುತುಂ ಪಾಡುತಿರ್ಪೊಂ-
ದನುರಾಗಂಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೫

ಎನಸುಂ ಮತ್ತನ್ಯದೈವಕ್ಕೆಱಗದ ಸಿರಮುಂ ನೇತ್ರಮುಂ ಶ್ರೋತ್ರಮುಂ ಮನ್-
ಮನಮುಂ ಮದ್‌ಬುದ್ಧಿಯುಂ ಮತ್‌ಕರತಳಯುಗಮುಂ ಜಿಹ್ವೆಯುಂ
ಘ್ರಾಣಮುಂ ಮಿ-
ಕ್ಕಿನ ಸರ್ವಾಂಗಂಗಳುಂ ನಿಮ್ಮಯ ದೆಸೆಗೆ ಕರಂ ಚೇಷ್ಟಿಸುತ್ತೊಮ್ಮೆ ಮರ್ಮವುಂ ನಿ-
ಲ್ವಿಸಮೆನ್ನೊಳ್ ಕೂಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೬

ಮುದದಿಂ ತ್ವತ್‌ಕೀರ್ತಿಯಂ ಕೇಳ್ವೆಡೆಯೊಳತುಳರೋಮಾಂಚದಿಂ
ಸ್ಪಂದದಿಂ ಗದ್-
ಗದದಿಂ ಸ್ವೇದಂಗಳಿಂ ಕಂಪನದಿನೊಲವಿನಿಂ ಲೀಲೆಯಿಂ ಲೋಭದಿಂ ಸನ್-
ಮುದದಿಂ ಸಂತೋಷದಿಂ ಶಾಶ್ವತಸುಖಮುಖದಿಂ ಶೈವಸಾಮ್ರಾಜ್ಯ ಸಮ್ಯಕ್-
ಪದವಾಂತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೭

ಹರನಾಮಂ ಕರ್ಣಮಂ ತಾಗಿದ ಸಮಯದೊಳಾನಂದದಿಂದುರ್ಕಿ ರೋಮಾಂ-
ಕುರವೆಳ್ದಶ್ರುಪ್ರವಾಹಂ ಗಳಗಳನಿಳಿತಂದಂಗವಲ್ಲಾಡಿ ಭಿನ್ನ-
ಸ್ವರದಿಂದಂ ಗದ್ಗದಂ ಪುಟ್ಟುತೆ ಬೆಮರ್ವನಿಗಳ್ ಪೊಣ್ಮೆ ಸಲ್ಲೀಲೆಯಿಂದಿ-
ರ್ಪಿರವಂ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೮

ಮನದೊಳ್ ವಾಕ್ಯಂಗಳೊಳ್ ನೋಳ್ಪೆಡೆಗಳೊಳೊಲವಿಂ ಮಾಳ್ಪ
ಕಜ್ಜಂಗಳೊಳ್ ಕಾ-
ನನದೊಳ್ ಕಾಮಂಗಳೊಳ್ ತಣ್ಣೆಳಲೊಳೆ ಬಿಸಿಲೊಳ್ ಜಾಗ್ರದೊಳ್
ಸ್ವಪ್ನದೊಳ್ ಮೂ-
ರ್ಛನೆಯೊಳ್ ದಾರಿದ್ರ್ಯದೊಳ್ ಸಂಪದದೊಳೆ ಸುಖದೊಳ್ ದುಃಖದೊಳ್
ದೇವ ನಿಮ್ಮಂ
ನೆನೆಯುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೯

ಭರದಿಂದಂ ಭೀತಿಯಿಂದಂ ಶರಣವಚನದಿಂದಾಸೆಯಿಂ ಭಾಷೆಯಿಂದ-
ಚ್ಚರಿಯಿಂ ಡಂಬಿಂ ವೃಥಾಳಾಪದಿನಸವಸದಿಂ ಕಾಮದಿಂ ಕೋಪದಿಂ ಕೂ-
ರ್ಪರ ದಾಕ್ಷಿಣ್ಯಂಗಳಿಂ ಖ್ಯಾತಿಯಿನನುದಿನವೆಲ್ಲಂದದಿಂ ದೇವ ನಿಮ್ಮಂ
ಸ್ಮರಿಯಿಪ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೦

ಚದುರಿಂದಂ ವೇಷಮಂ ತೋಱದೆ ನಿಜಗುಣಮಂ ಬೀಱದತ್ಯುಷ್ಣಮಂ ಹೇ-
ಱದೆ ಡಂಬಿಂ ಸಾರದೆಂತುಂ ಶರಣವಚನಮಂ ಮೀಱದತ್ತಿತ್ತಲುಂ ಜಾ-
ಱದೆ ಬೇಱಿಕೊಂದಿಚ್ಛೆಯಿಂ ಕೀಱದೆ ಪರವಶದಿಂ ತಾಱದೀ ಭಕ್ತಿಯಂ ಮಾ-
ಱದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೧

ಇದನೊಲ್ವೆಂ ದೈನ್ಯಮಂ ಸೂಡದೆ ಪರವಧುವಂ ನೋಡದೇನೊಂದುಮಂ ಬೇ-
ಡದೆಯಾರಂ ಮಿಥ್ಯೆಯಿಂ ಕಾಡದೆ ಪರಸುಖದೊಳ್ ಬಾಡದುದ್ರೇಕದೊಳ್ ಕೋ-
ಡದೆ ಪಾಪಾಂಭೋಧಿಯೊಳ್ ಕೂಡದೆ ಚಪಳತೆಯಂ ನೀಡದತ್ಯಾಶೆಯಂ ಮಾ-
ಡದೆ ಬಾಳ್ವಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೨

ಸತಿ ಕಾರುಣ್ಯಂ ಕುಮಾರಂ ಮತಿ ಸಖನುರುಸತ್ಯಂ ಪ್ರಧಾನಂ ವಿವೇಕಂ
ಸ್ತುತಿ ಭಂಡಾರಂ ಸುಧರ್ಮಂ ಕರಿತುರಗರಥಾಖ್ಯಂ ನಿರಾಶಾ-ಸ್ವದೇಶಂ
ಸತತಂ ತಾನಾಗಿ ಶಾಂತಿಸ್ಥಲದೊಳೆಸೆವ ಸದ್ಭಕ್ತಿ ಸಪ್ತಾಂಗರಾಜ್ಯ-
ಸ್ಥಿತನಾಗಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೩

ಗುರುವಂ ನಂಬಿರ್ದು ಮತ್ತಾ ಗುರುಕರುಣದೆ ಪಂಚಾಕ್ಷರೀಮಂತ್ರಮಂ ತಾ-
ಳ್ದು ರಹಸ್ಯಂ ಭಕ್ತಿಯಿಂದಂ ಜಪಮನೆಣಿಸಿ ಗುರ್ವಾಜ್ಞೆಯಂ ಮೀಱದತ್ಯಾ-
ದರದಿಂದಂ ನೆತ್ತಿಯೊಳ್ ಪೊತ್ತುಸುಪಮುಸುಖದಿಂ ಬಾಳ್ವ ಭೃತ್ಯತ್ವಮಂ ಮುದ್-
ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೪

ಅಲರಿಂ ಕೂರ್ತಿಟ್ಟೊಡಂ ಚಕ್ರದಿನುಱಿ ಮುಳಿದಂತಿಟ್ಟೊಡಂ ಹಂಸತೂಲ-
ಸ್ಥಲದೊಳ್ ತಾಂ ಬೈತೊಡಂ ಮುಳ್ಗಳ ಹೊಸಹಸೆಯೊಳ್ ಬೈತೊಡಂ ಸ್ನೇಹದಿಂದಂ
ನಲವಿಂದಂ ಸ್ತೋತ್ರಮಂ ಮಾಡಿದೊಡೆ ಪಳಿದೊಡಂ ಸರ್ವಮೊಂದಂದಮೆಂದಾಂ
ಸಲೆ ಕಾಣ್ಬಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೫

ಎಸೆವೀ ಪಂಚಾಕ್ಷರೀಮಂತ್ರಮೆ ಗುರುತರಮಂತ್ರಂ ವಿಶುದ್ಧಾಂಗಲೇಪಂ
ಭಸಿತಂ ರುದ್ರಾಕ್ಷಿಯೇ ಭೂಷಣತತಿ ಪರಮಸ್ವಾಮಿ ನೀಂ ಪೂಜ್ಯನಾನಂ-
ದಸಮೇತಂ ಭಕ್ತನೇ ಸತ್ಕುಲಜನೆನಿಪಿದಂ ನಂಬಿ ಮತ್ತೇನುಮಂ ಭಾ-
ವಿಸದಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೬

ಕರೆವಲ್ಲಿಂ ಮುನ್ನಮೋ ಓ ಮಗನೆ ಮಗನೆ ಬಂದೆಂ ದಿಟಂ ಬಂದೆನೆಂದಾ-
ದರದಿಂದಂ ನೀನೆ ಬಂದೆನ್ನವಯವವನಿತಂ ಮುಟ್ಟಿ ನೊಂದಾ ಬಳಲ್ದಾ
ಕರೆದಾ ಕಂದಾ ಎನುತ್ತುಂ ಕೃಪೆ ಮಿಗೆ ನಲವಿಂ ನೋಡಿ ಮುಂಡಾಡುತೆಂದುಂ
ಶಿರದೊಳ್ ಕೈಯಿಕ್ಕಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೭

ನಿಮಗೆನ್ನಂ ಮಾಱುಗೊಟ್ಟೆಂ ಪುರಹರ ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ
ನಿಮಗೆನ್ನಂ ಸೂಱೆಗೊಟ್ಟೆಂ ನಿಮಗೆ ಹರುಷದಿಂದೊಚ್ಚತಂ ಕೊಟ್ಟೆನಾಹಾ
ನಿಮಗೆನ್ನಂ ಮೆಚ್ಚುಗೊಟ್ಟೆಂ ಗುರುವೆ ಘನವೆ ಸಂತೋಷದಿಂದೊಪ್ಪುಗೊಟ್ಟೆಂ
ನಿಮಗೆನ್ನಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೮

ಮುದದಿಂದಂ ಕಾಮಮಂ ಕೋಪಮನುಱೆ ಜಱೆದಾ ಮೋಹಮಂ ಪಾಂಟ ಲೋಭ-
ತ್ವದ ಬೇರಂ ಕಿಳ್ತು ಮಾತ್ಸರ್ಯಮನುಡುಗಿ ಮದಾಲೇಪಮಂ ತೀರ್ಚಿ ಯಾಶಾ-
ಸದನಕ್ಕಾಸತ್ತು ಬೇಸತ್ತತುಳಶಿವಸುಖಾವಾಸದೊಳ್ ಭಕ್ತಿಯಿಂ ತ್ವತ್-
ಪದಮಂ ಸಾರ್ವಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೭೯

ಎನಗಾರ್ ದೈವಂ ವಿರೂಪಾಕ್ಷನೆ ಗುರುವೆನಗಾವಂ ವಿರೂಪಾಕ್ಷನೇ ಕೇಳ್
ಜನಕಂ ತಾನಾರ್ ವಿರೂಪಾಕ್ಷನೆ ಜನನಿಯದಾವಳ್ ವಿರೂಪಾಕ್ಷನೇ ಆ-
ಳ್ದನದಾವಂ ಶ್ರೀವಿರೂಪಾಕ್ಷನೆ ನಿಜಸಖನಾವಂ ವಿರೂಪಾಕ್ಷನೇ ಎಂ-
ಬಿನಿತಂ ಸೈತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೦

ಮನೆದೈವಂ ಮುಖ್ಯದೈವಂ ಸುಖತರಕುಲದೈವಂ ಪರಾನಂದದೈವಂ
ಮನದೊಳ್ ನಟ್ಟಿರ್ಪ ದೈವಂ ಶರಣಜನಮಹೋತ್ಸಾಹದೈವಂ ಕರಂ ಪೆಂ-
ಪಿನ ದೈವಂ ದೈವದೈವಂ ಸಕಲಸುಕೃತದೈವಂ ಸುಧಾಕಾರದೈವಂ
ಘನದೈವಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೧

ಪರಮಾರ್ಥಂ ನಿಮ್ಮ ಸಮ್ಯಕ್‌ಪರತರನಿಜಮಂ ಭಾವಿಸಲ್ ಬಣ್ಣಿಸಲ್ ತಾ-
ಮರಸೋದ್ಭೂತಂಗೆ ಶಕ್ರಂಗಸುರರಿಪುಗೆ ವೇದಕತರ್ಕ್ಯಂದಲೆಂದಂ
ದೊರೆವಂತಾಂ ಮರ್ತ್ಯನೆಂಬೀ ವಚನಮೆ ಪರಿಹಾಸಾಸ್ಪದಂ ದೇವ ನೀನೇ
ಕರುಣಂಗೆಯ್ಯುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೨

ಬಿಸವಂ ತಾಳ್ದಿರ್ದು ನಿತ್ಯಂ ಸ್ಮರನನುರಿಪಿಯುಂ ಕಾಮಿ ಸರ್ವೇಶ್ವರಂ ಮಾ-
ತ್ರಸಮಂ ಭಿಕ್ಷೇಶ್ವರಂ ಸರ್ವಮನಳಿದನಘಂ ಚಂದ್ರನಂ ಸೂಡಿಯುಂ ಕೋ-
ಪಸಮಾಯುಕ್ತಂ ವಿರುದ್ಧಪ್ರಕೃತಿ ತಿಳಿಯದಾರ್ಗಂ ಕೃಪಾವಾರ್ಧಿ ನಿನ್ನಂ-
ಘ್ರಿಸರೋಜಂದೋಱಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೩

ಸ್ಥಿರವಲ್ಲಂ ನೋಡೆ ಸರ್ಗಸ್ಥಿತಿಲಯಮಯವಾಗಿರ್ಪುದಿಂತೀ ಪ್ರಪಂಚಂ
ಸ್ಥಿರರೂಪಂ ನೀನೆ ಕರ್ಮದ್ವಿತಯವಿರಹಿತಂ ನೀನೆ ಶುದ್ಧಾತ್ಮಕಂ ನೀ-
ನೆ ರಸಾದಿವ್ಯೋಮದಿಕ್‌ಪೂರಿತ ನಿಜನಿಧಿ ನೀನೆಂಬಭಿಜ್ಞಾನಮಂ ಮದ್-
ಗುರುವೇ ನೀನಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೪

ಅಪರಿಚ್ಛಿನ್ನಂ ಸ್ವತಂತ್ರಂ ನಿರವಧಿಯುಮಳಂ ಶಂಕರಂ ನಿತ್ಯನಾನಂ-
ದಪದಂ ಶಾಂತಾರ್ಕಕೋಟಿಪ್ರಭನಜರನಚಿಂತ್ಯಂ ಪರಂಧಾಮರೂಪಂ
ವಿಪುಳಜ್ಞಾನಾಬ್ಧಿ ಸತ್ಯಂ ನಿರುಪಮನಿಧಿ ನೀನೆಂಬಭಿಜ್ಞಾನಮಂ ನೀಂ
ಕೃಪೆಯಿಂ ಮಾಡುತ್ತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೮೫

ಸ್ಥೂಲಂ ಸೂಕ್ಷ್ಮಂ ಸುಸೂಕ್ಷ್ಮಂ ಸುಲಭನಸುಲಭಂ ಪುಣ್ಯಪಾಪಪ್ರದೂರಂ
ನೀಲಗ್ರೀವಂ ಚಿದಾತ್ಮಂ ಭವನಭವನಸೂನಾದ್ಯನಾದ್ಯಂತಶೂನ್ಯಂ
ಕಾಲಘ್ನಂ ಕಾಲರೂಪಂ ನತನಿಕರವಿಪಜ್ಜಾಲವಿಚ್ಛೇದಲೀಲಾ-
ಲೋಲಂ ನೀಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೬

ಶಿವ ಸರ್ವಾಧಾರ ಗಂಗಾಧರ ಪುರಹರ ಸರ್ವಜ್ಞ ಸರ್ವೇಶ ಗೌರೀ-
ಧವ ನೀಲಗ್ರೀವ ಕಾಲಾಂತಕ ಪಶುಪತಿ ಫಾಲಾಕ್ಷ ಭೋಗೀಂದ್ರಭೂಷಾ-
ಭವ ರುದ್ರೇಶಾನ ಭರ್ಗ ಪ್ರಮಥನಿಧಿ ಮಹಾದೇವ ಮಾರಾರಿ ನಿತ್ಯೋ-
ತ್ಸವ ಸತ್ಯಪ್ರೇಮಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೭

ಗಿರಿಶ ಶ್ರೀಕಂಠ ದಕ್ಷಾಧ್ವರಹರ ವೃಷಭಾರೂಢ ಕಾಪಾಲಿಯಂಧಾ-
ಸುರವೈರಿ ವ್ಯೋಮಕೇಶ ಕ್ರತುಕುಲನೃಪತಿ ಸ್ಥಾಣು ಭೂತೇಶ ಪಂಚಾ-
ವರಣಪ್ರತ್ಯಕ್ಷ ಪಂಚಾನನ ಮೃಡ ಗಜಚರ್ಮಾಂಬರಶ್ರೇಷ್ಠ ವಿಶ್ವೋ-
ದರ ಸದ್ಯೋಜಾತ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುನೆನ್ನಂ ೫೮

ಹರ ಭೀಮ ತ್ರ್ಯಕ್ಷ ಭಕ್ತವ್ರಜಹೃದಯ ಪಿನಾಕಿ ತ್ರಿಶೂಲಿ ತ್ರಿಕಾಲಾ-
ಕ್ಷರ ನಿರ್ದೇಹಾಭವಾ ಧೂರ್ಜಟಿ ಜಟಲಶಿರೋಮಾಲಿ ಶಂಭು ಪ್ರಪಂಚೋ-
ತ್ತರ ಪಂಚಬ್ರಹ್ಮ ಪಂಚಾಧಿಕ ಹಿಮಕರಚೂಡಾಮಣೀ ವೀರಭದ್ರೇ-
ಶ್ವರ ಕಾಲಾತೀತ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೫೯

ವರಕಾರುಣ್ಯಾಬ್ಧಿ ಷಡ್‌ದರ್ಶನಹಿತ ಪರಮಸ್ವಾಮಿ ಸರ್ವಜ್ಞ ಪಂಚಾ-
ಕ್ಷರಗರ್ಭಾವಾಸ ಮಾದ್ಯತ್‌ಪ್ರಮಥಜನಪರೀತೋಷ ವಿಶ್ವೇಶ ತತ್ತ್ವಾ-
ಕರ ತಾರಾದ್ರೀಶ ನಾರಾಯಣನಯನಲಸತ್‌ಪಾದ ಸಾದಾತ್ಮ ಭಕ್ತಾ-
ತುರಚಿತ್ತಗ್ರಾಹಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೦

ಶಿವ ನಿಮ್ಮಿಂ ಪುಟ್ಟಿತೀ ಮಾಯೆ ಗಡೆನಿಪಿದನಾಂ ಸೈರಿಸೆಂ ಪುಟ್ಟಿತೆಂಬೊಂ-
ದವಿಚಾರಂ ನಿಷ್‌ಕ್ರಿಯಾತ್ಮಪ್ರಭುತನಕೆ ಕರಂ ಹಾನಿ ಶುದ್ಧಾತ್ಮನೊಳ್ ಶಂ-
ಭುವಿನೊಳ್ ಸಮ್ಯಕ್‌ಪರಾನಂದದ ತವನಿಧಿಯೊಳ್ ನಿನ್ನೊಳೀ
ಭ್ರಾಂತಿಯೆಂಬಾ-
ಶ್ರವೆಯುಂ ತಗೊರ್ತ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೬೧

ನೊಡಲಿಂದಂ ಕೂರ್ಮರೋಮಂ ಬಗೆಯೆ ಶಶಿವಿಷಾಣಂ ವಿಯತ್ಪುಷ್ಪ
ದಂತಿ-
ಲ್ಲದುದೇ ಸತ್ಯಂ ಪ್ರಪಂಚಂದಱಿಡು ತಿಳಿಡು ನಿಷ್ಕಾಮ ನಿರ್ಮಾಯ ನಿತ್ಯಾ-
ಭ್ಯುದಯಾನಂದ್ಯೈಕತೇಜೋನಿಧಿ ನಿರುಪಮ ನಿರ್ಲೇಪ ನಿರ್ವಾಣ ನೀನೆಂ-
ಬಿದನೇ ಸ್ತುತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೩

ತೋಱುತ್ತಿರ್ಪೀ ಜಗಂ ತಾನಱಿವಿನ ಮುಖದೊಳ್ ತೋಱದಿರ್ಪಂತೆ
ತೋರ್ಕುಂ
ತೋಱಲ್ ಪೇಳಲ್ಕೆ ಕೇಳಲ್ಕಸದಳಮೆನಿಪಾ ಬ್ರಹ್ಮತಾಬ್ರಹ್ಮವಾಗು-
ತ್ತಾಱುಂ ಬಣ್ಣಕ್ಕಮೇಳುಂ ತನುವಿನ ಪೊರೆಗೆಂಟುಂ ಶರೀರಕ್ಕೆ ಮಿಕ್ಕುಂ
ಮಿಗಿಱಿರ್ಪಂತಿತ್ತು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೪

ಕೊಳಗುತ್ತಿರ್ಪರ್ಕನಿಂದಾಗಸಮೆಸಿತಸಿತಂ ಮಾಡಿದಂತಿರ್ಪ ಧಾತ್ರೀ-
ತಳಮೆಲ್ಲಂ ಚಂದ್ರನಿಂದಂ ಸಮೆದುದೆನಿಸಿದಂತಿರ್ಪ ದಿಕ್ಸಂಕುಳಂ ನಿ-
ರ್ಮಳವಿದ್ಯುಲ್ಲೇಖೆಯಿಂ ನಿರ್ಮಿಸಿದವೊಲೆಸೆದಿರ್ಪ ಪರಂಜ್ಯೋತಿ
ಯೆನ್ನೊಳ್
ಬೆಳಗುತ್ತಿರ್ಪಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೫

ಗುರುವಿಂ ಶುದ್ಧಾತ್ಮನಾದೆಂ ಗುರುವಿನ ಕೃಪೆಯಿಂದಂ ಜಗತ್ಪೂಜ್ಯನಾದೆಂ
ಗುರುವಿಂ ನಿಷ್ಕಾಮನಾದೆಂ ಘನತರಗುರುವಿಂ ಶಾಂತಿಸಂಪನ್ನನಾದೆಂ
ಗುರುವಿಂ ಸರ್ವಜ್ಞನಾದೆಂ ದಿಟವೆನಿಸಿದನೆನ್ನೊಳ್ ದಿಟಂ ಮಾಡುತುಂ
ಮಿಥ್-
ಗುರುವೇ ಗೌರೀಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೬

ಎನ್ನಾನಂದಾಬ್ಧಿಯೇ ಎನ್ನನುಪಮಸುಧೆಯೇ ಎನ್ನ ಪುಣ್ಯಸ್ವರೂಪೇ
ಎನ್ನಾಯುಃಪುಂಜವೇ ಎನ್ನಯ ಗತಿಮತಿಯೇ ಎನ್ನ ವಿಜ್ಞಾನಮೂರ್ತೀ
ಎನ್ನತ್ಯಾಶ್ಚರ್ಯವೇ ಎನ್ನತಿಶಯಗುರುವೇ ಎನ್ನ ಚೈತನ್ಯದಾಗೇ
ಎನ್ನ ಪ್ರಾಣೇಶ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೭

ನಿತ್ಯಜ್ಞಾನೈಕಮೂರ್ತೀ ಸುಖತರಪರಮಾನಂದ ಸರ್ವಜ್ಞಮೂರ್ತೀ
ನಿತ್ಯತ್ವಾಧಾರಮೂರ್ತೀ ನಿರವಯವಮಹಾಮೂರ್ತಿ ನಿರ್ಲೇಪಮೂರ್ತೀ
ನಿತ್ಯಪ್ರತ್ಯಕ್ಷಮೂರ್ತೀ ನಿಖಿಲಗುಣಗಣಾಧಾರ ನಿರ್ಮಾಯಮೂರ್ತೀ
ನಿತ್ಯಶ್ರೀಮೂರ್ತಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೭

ಬಿಡೆನೀಶಾ ನಿಮ್ಮ ಪಾದಾಬ್ಜಮನೆಲೆಲೆ ಬಿಡೆಂ ನೀಳ್ದೊಡಂ ಪೋಳ್ದೊಡಂ ಪೊ-
ಯ್ದೊಡಮುಂದಿಂದೆಂದುಮೆಂತುಂ ಬಿಡೆನಭವ ಬಿಡೆಂ ಶಂಕರಾ
ಮಾಣೆನಾಂ ಬಲ್-
ಪಿಡಿದೆಂ ಮತ್ತತ್ತ ಚಿತ್ತಂ ಚಲಿಯಿಸದೆಲೆ ಮತ್ಸ್ವಾಮಿ ನಿಮ್ಮಾಜ್ಞೆಯಿಂದಂ
ಪ್ಪುಡನೇ ಭಕ್ತಾರ್ಥಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೮

ಕರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಭರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಹರ್ತಾರಂ ನೀನೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ
ಕೂರ್ತಿಂತೋರಂತೆ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೯೯

ಭರದಿಂ ಕೇಳ್ದೋದುವಾನಂದದೊಳತಿಶಯದಿಂ ಮೆಚ್ಚಿ ಲಾಲಿಪ್ಪವರ್ಗಾ-
ದರದಿಂ ನಿತ್ಯಾಯುವಂ ಸಂಪದವನಭವನೀಯುತ್ತು ಮಿರ್ಕೆಂದಸೂನಂ
ಧರೆಯೊಳ್ ಕೈಕೊಂಡು ರಕ್ಷಾಶತಕವನೊಲವಿಂ ಪ್ರೇಮದಿಂ ನಚ್ಚಿ ಪೇಳ್ದಂ
ಹರಿದೇವಂ ದೇವ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ೧೦೦

---

ಹಿಂದೇನೇನಾಗಿ ಬಂದೆಂ ಮನುಜಜನನಮುಂತಾಸಿದೆಂತಾಯ್ತು ಸಂಸಾ-
ರಂ ದೋಷಂ ಕಾಮಲೋಭಾದಿಗಳೆನಗಮಿವೆಲ್ಲಿಂದೆ ಬಂದತ್ತು ಮತ್ತಂ
ಮುಂದೇನಾದಪ್ಪೆನೆಂದಾನಱಿಯದೆ ಭಯದಿಂ ಶಂಕಿಸುತ್ತಿರ್ದಪೆಂ ನೀಂ
ಸಂದೇಹಂ ಮಾಡಿ ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ

# ಪಂಪಾಶತಕಂ

ಶ್ರೀಮದ್‌ರಾಜಕಳಾವತಂಸ ಧರೆ–ಚಂದ್ರಾರ್ಕಾಗ್ನಿ–ಜೀವಾನಿಲ–
ವ್ಯೋಮಾಂಬುಪ್ರಕರಂಗಳಿಂ ಸಕಲಮಂ ರಕ್ಷಿಪ್ಪ ಸರ್ವೇಶ ಸು–
ತ್ರಾಮಾದಿತ್ರಿದಶವ್ರಜಾರ್ಚಿತಪದಾಂಭೋಜಾತ ಸದ್ಭಕ್ತಿಯಂ
ಪ್ರೇಮಂ ಕೈಮಿಗೆ ಮಾಡು ನೀನೆನಗೆ ಪಂಪಾ [ಶ್ರೀ]ಪುರಾಧೀಶ್ವರಾ ೧

ಪುಳಕದ ಹಾದಿಗೆಂದು ಪಥವಪ್ಪುದು ಕಣ್ಗಳ ಕೋಡಿಗೆಂದು ನೀ–
ರ್ಗಳ ಕಡೆಗಾಣ್ಬವೆನ್ನ ಚರಣಂಗಳ ಲೀಲೆಗದೆಂದು ಕೀಲ್ಗಳ–
ಚ್ಚಳಿವುದು ಕೈಯ ಕಂಪದ ಕಡಂ ತೆಱೆದಪ್ಪುದು ತಪ್ಪದೀ ಮನೋ–
ಗಳಿತತರಾಬ್ಧಿಗೆಂದು ಮಿಗೆ ಮೇಱೆಯುಗಲ್ವುದು ಹಂಪೆಯಾಳ್ದನೇ ೨

ಪುಳಕದ ತೊಟ್ಟಿಲೊಳ್ ಬೆಮರ ಮಜ್ಜನದಿಂ ಪೆಸಲೆಣ್ಣೆ(?)ಯಿಟ್ಟು ಕ–
ಣ್ಗಳ ಮೊಲೆವಾಲನೂಡಿ ತೊದಳಿಂದವೆ ಬಣ್ಣಿಸಿ ಹಾಡಿ ಕಂಪದಿಂ–
ದಳವಡೆ ತೂಗಿಯುಚ್ಚಸುಖನಿದ್ರೆಯನಂದಮನುಂಟುಮಾಡಿ ನಿ–
ಶ್ಚಳನಿಜಭಕ್ತಿಯಿತ್ತು ಸಲೆ ರಕ್ಷಿಪುದೆಂದೆಲೆ ಹಂಪೆಯಾಳ್ಡನೇ ೩

ಹರಹರ ಎನ್ನ ಕೈಯ ಹಸಿವೋಡಲಣಂ ತನುವಿಂದೆ ಪೂಜೆಯಂ
ವಿರಚಿಪೆನೆಂದೊ ಕಣ್ಗಳ ಬಱಿಂ ತಿಳಿಯಲ್ ಪೊಸನೋಟದಿಂದೆ ಕೆಂ–
ಕರಿಸುವೆನೆಂದೊ ಮೈಮುಱಿದು ಕಣ್ಗೆಡಲಪ್ಪಿ ಮನೋನುರಾಗದಿಂ
ನೆರೆವೆನದೆಂದೊ ನಿಮ್ಮನತಿನೇಹದೆ ಪೇಳೆಲೆ ಹಂಪೆಯಾಳ್ದನೇ ೪

ಕರೆವುದದೆಂದು ಕಾಲ್ವಿಡಿಸಿಕೊಳ್ವುದದೆಂದು ದಯಾಕಟಾಕ್ಷದಿಂ
ಪೊರೆವುದದೆಂದು ಮೆಲ್‌ನುಡಿಗಳಿಂ ಮುದವೇಱುಪುದೆಂದು ಸೋಂಕಿನಿಂ–
ದೊರೆವುದದೆಂದು ಸಂತಸದೆ ಪೆರ್ಚಿಪುದೆಂದಮರ್ದಪ್ಪಿನೊಳ್ ಕರಂ
ಕರಗಿಪುದೆನ್ನನೆಂದೊಸೆದು ನೀಂ ಕೃಪೆಯಿಂದೆಲೆ ಹಂಪೆಯಾಳ್ದನೇ ೫

ಕಿರೆಮುಸಗಲ್ ಸುಖಾಶ್ರುವಿದಿರೇಱುತಿರಲ್ ಪುಳಕಂ ಬೆಮರ್ ಕರಂ
ಪರಿಯಿಡೆ ಗದ್ಗದಂ ಸುೞಿಗೊಳುತ್ತಿರೆ ಕಂಪನಮುರ್ಕಿ ಲೀಲೆಯೊ-
ತ್ತರಿಸುತಿರಲ್ ನವೀನನಿಜಭಕ್ತಿತರಂಗಿಣಿ ಮೀಱುತುಬ್ಬರಂ-
ಬರಿಯುತುಮೆನ್ನ ಮೇಲೆ ಮಡುಗಟ್ಟುವುದೆಂದೆಲೆ ಹಂಪೆಯಾಳ್ದನೇ ೬

ನಡೆತಂದೆನ್ನಯ ಕಣ್ಗಳಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಬಿಡದಂತೆನ್ನಯ ಜಿಹ್ವೆಯಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀಂ
ಎಡೆಗೊಂಡೆನ್ನಯ ಚಿತ್ತದಲ್ಲಿರು ವಿರೂಪಾಕ್ಷಾ ವಿರೂಪಾಕ್ಷ ನೀ-
ನಿಡಿದಂತೆನ್ನೊಳೆ ಕೂಡಿ ನಿಲ್ಲೆಲೆ ವಿರೂಪಾಕ್ಷಾ ವಿರೂಪಾಕ್ಷನೇ ೭

ನೋಡದ ಕಣ್ಗಳೇಕೆ ಸಲೆ ಕೇಳದ ಕರ್ಣಮದೇಕೆ ಭಕ್ತಿಯಿಂ
ಪಾಡದ ಬಾಯದೇಕೆ ಪೆಸರ್ಗೊಳ್ಳದ ಜಿಹ್ವೆಯದೇಕೆ ಪೂಜೆಯಂ
ಮಾಡದ ಕೈಗಳೇಕೆ ನೆಱೆ ಸೋಂಕದ ದೇಹಮದೇಕೆ ಕೂಡಿಯ-
ಲ್ಲಾಡದ ಚಿತ್ತವೇಕೆನಗೆ ಹಂಪೆಯ ಲಿಂಗವೆ ನಿಮ್ಮೊಳಕ್ಕಱಿಂ ೮

ಎಂದುಂ ನಿಮ್ಮೊಳಲೇ ಮಹೇಶನೆ ಮನಂ ಬಂದಂತೆ ಚಿಂತಿಪ್ಪ ಕಣ್
ಬಂದಂತೀಕ್ಷಿಪ ಜಿಹ್ವೆ ಬಂದ ತೆಱದಿಂ ಬಣ್ಣಿಪ್ಪ ಮೈಯ್ಯುರ್ಬಿನಿಂ
ಬಂದಂತಾಂ ಪುಳಕಿಪ್ಪ ಕೈಗಳನಿತುಂ ಬಂದಂತೆ ಪೂಜಿಪ್ಪ ಕಾಲ್
ಬಂದಂತಾಡುವ ಸೈಪು ಸಾರ್ವುದೆನಗಿನ್ನೆಂದೋ ವಿರೂಪಾಕ್ಷನೇ ೯

ಇದು ಚಿತ್ರಂ ವರಮಂತ್ರಸಂತತಿ ವಿರೂಪಾಕ್ಷಂ ವಿರೂಪಾಕ್ಷನೆಂ-
ಬುದೆ ಮಾತಕ್ಕಟ ತನ್ನ ಜೀವಮೆ ವಿರೂಪಾಕ್ಷಾ ವಿರೂಪಾಕ್ಷನಾ-
ಮದಿನಾಗಳ್ ಪುದಿದಂತಿರಿರ್ಪುದುಮಿದೇನೀಶಂಗೆನುತ್ತೆಲ್ಲರುಂ
ಪದೆದೆನ್ನಂ ನುಡಿವಂದದಿಂ ನೆನೆವೆನಿನ್ನೆಂದೋ ವಿರೂಪಾಕ್ಷನೇ ೧೦

ಕ್ರಮದಿಂ ಪೂಜಿಪ ಪೂಜೆ ಮೆಲ್ಲನೆ ಸಡಿಲ್ದಾನಂದಮುಣ್ಮಾಡುತಿ-
ರ್ಕೆಮ ಸೋತ್ಸಾಹದೆ ಕಣ್ಗಳೊಳ್ ಸುಖರಸಂ ಹಸ್ತಂಗಳೊಳ್ ಕಂಪನಂ
ಕ್ರಮದೊಳ್ ನರ್ತನಮಂಗದೊಳ್ ಪುಳಕಮಾ ಜಿಹ್ವಾಗ್ರದೊಳ್ ಲಲ್ಲೆ ಸಂ-
ಭ್ರಮದಿಂ ಪುಟ್ಟಲದೆಂದು ಪೂಜಿಸುವೆನಾಂ ನಿನ್ನಂ ವಿರೂಪಾಕ್ಷನೇ ೧೧

ಸತಿಪುತ್ರರ್ ಮಿತ್ರರಾಪ್ತರ್ ತನುಧನಮನನೆಂಬಿಂತಿವಂ ನಿತ್ಯಮೆಂದು-
ನ್ನತರ ವ್ಯಾಸಂಗದಿಂ ಮೆಯ್ಮಱಿಯದೆ ಮರುಳಾಗಿರ್ದನೆನ್ನಂ ದುರಾಶಾ-
ನ್ವಿತನಂ ದುರ್ಮೋಹಿಯಂ ದುಸ್ತರತರವಿಷಯವ್ಯಾಪ್ತನಂ ದುರ್ವಿವೇಕೋ-
ದಿತನಂ ಮುರ್ಜೋರ್ಥನಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷಲಿಂಗಾ ೧೨

ಅನುಪಮದಾನಿಯಪ್ರತಿಮದಾನಿ ನಿರಂತರದಾನಿ ಸಂದ ಪೆಂ-
ಪಿನ ಘನದಾನಿ ಕೌತುಕದ ದಾನಿ ಮಹೋನ್ನತದಾನಿಯೆಂದು ನಿ-
ನ್ನನೆ ಪೊಗಳುತ್ತುಮಿಂತಿದೆ ಸಮಸ್ತಜಗಜ್ಜನವೀ ಸುಕೀರ್ತಿಗೆ-
ನ್ನನೆ ನಡೆ ನೋಡದಿರ್ಪಿರವದರ್ಕನುಕೂಲಮೆ ಪಂಪೆಯಾಳ್ದನೇ ೧೩

ನಾನಾಜನ್ಮಂಗಳೊಳ್ ಬಾರದ ಪರಿಭವಮುಂ ಬಂದ ತನ್ನಂದಮುಂ ತಾ-
ನೇನೆಂದೊಂದೆಳ್ಳನಿತ್ತುಂ ನೆನೆಯದು ತನಗೆಂತಿಚ್ಛೆಯಂತಿರ್ದು ನಿನ್ನೀ
ಧ್ಯಾನಾರಂಭಕ್ಕಣಂ ಸಲ್ಲದು ಸುಡು ಸುಡು ಛೀ ಮನ್ಮನೋವೃತ್ತಿ ನಿನ್ನಂ
ತಾನಾಱಿಂ ನೀನೆ ಸಂತಂ ನಿಲಿಸಿದನೊಲವಿಂದಂ ವಿರೂಪಾಕ್ಷಲಿಂಗಾ ೧೪

ಪಸಿವಿಂದಂ ಬೇಂಟೆಗಂ ಸಟ್ಟಡವಿಗೆ ನಡೆತಂದೇಱಿ ಬಿಲ್ವಾಗ್ರಮಂ ವ್ಯಾ-
ಪಿಸದತ್ತಿತ್ತಂ ಮೃಗಧ್ಯಾನದೊಳಿರೆ ಶಿವರಾತ್ರಿವ್ರತಂಗೆಯ್ದನೆಂದಂ-
ದೊಸೆದಾ ಬೇಡಂಗೆ ಸಾರೂಪ್ಯದ ಘನಪದಮುಂ ಕೊಟ್ಟೊಡಂ ದಾನಿಯೆಂದ-
ರ್ಚಿಸಿ ನಿನ್ನಂ ನಂಬಿದೆಂ ರಕ್ಷಿಪುದೆಲೆ ಕೃಪೆಯಿಂದಂ ವಿರೂಪಾಕ್ಷನೆನ್ನಂ ೧೫

ಮೋಹಕ್ಕೋರೊರ್ಮೆ ಮಾತ್ಸರ್ಯದ ಮಡಿನೆಳೆಗೋರೊರ್ಮೆ ಸಂದಿರ್ದ
ಕಾಮೋ-
ತ್ಸಾಹಕ್ಕೋರೊರ್ಮೆ ಕೊರ್ವಿರ್ದೊದವಿದ ಮದಕೋರೊರ್ಮೆ ಪೆರ್ಚಿರ್ದ
ಲೋಭ-
ವ್ಯೂಹಕ್ಕೋರೊರ್ಮೆ ಕೋಪೋನ್ನತಿಯ ಮಮತೆಗೋರೊರ್ಮೆ ಮೆಯ್ವೆ-
ರ್ಚಿನಿಂ ದೇ-
ಹೋಹಂ ಎಂದೆಂಬುದಂ ಮಾಣಿಸು ಮನಕೆಯಿದೊಂದಂ
ವಿರೂಪಾಕ್ಷಲಿಂಗಾ ೧೬

ಮದನವಿರೋಧಿ ಬಾರ ದುರಿತಾಂತಕ ಬಾರ ಪುರಾರಿ ಬಾರ ಶಾ-
ರದಶಶಿಮೌಳಿ ಬಾರ ಫಣಿಕುಂಡಲ ಬಾರ ಮಹೇಶ ಬಾರ ಪು-
ಣ್ಯದ ನೆಲೆವೆರ್ಚೆ ಬಾರ ಸತತಂ ಪೊರೆವಾಳ್ದನೆ ಬಾರ ಮೇರೆದ-
ಪ್ಪಿದ ಕರುಣಾಬ್ಧಿ ಬಾರ ಹರ ಬಾರೆಲೆ ಬಾರೆಲೆ ಹಂಪೆಯಾಳ್ವನೇ ೧೭

ಕರಣಂಗಳ್ ಕಳೆಯೇಱೆ ಲೋಚನಯುಗಂ ನೀರೇಱೆ ಮೆಯ್ಯೆಲ್ಲವಂ-
ಕುರವೇಱಲ್ ನುಡಿ ಕಂಪವೇಱೆ ಚರಣಂಗಳ್ ಲೀಲೇಯೇಱಲ್ ಮೊಗಂ
ಸಿರಿಯೇಱಲ್ ತಲೆಗೇಱುದುತ್ಸವದೆ ನಿಮ್ಮಂ ಪೂಜಿಸುತ್ತಾನುಮಾ-
ದರದಿಂದೀಕ್ಷಿಸುತಾಡುತಿರ್ಪುವೆನಗಿನ್ನೆಂದೋ ವಿರೂಪಾಕ್ಷನೇ ೧೮

ಕಯ್ಗೆ ನಮೋನಮೋ ಪದೆದು ಕಂಪಿಸುತೀಶ್ವರ ನಿಮ್ಮನರ್ಚಿಪಾ
ಬಾಯ್ಗೆ ನಮೋನಮೋ ತೊದಳದುನ್ನತಭಕ್ತಿಯೊಳೆಯ್ದೆ ಪಾಡುವಾ
ಮೆಯ್ಗೆ ನಮೋನಮೋ ಪುಳಕಮಂ ಕೆಲಸಾರ್ಚುತೆ ಸೋಂಕಿ ಪೆರ್ಚುವಾ
ಮಯ್ಗೆ ನಮೋನಮೋ ಬಿಡದ ಲಜ್ಜೆಯ ನೇಹದೆ ಹಂಪೆಯಾಳ್ದನಂ ೧೯

ಉಡುವೊಡೆ ಸಂತತಂ ಪುಲಿದೊವಲ್ ನಿಮಗಲ್ಲದೊಡಾ ದಿಗಂಬರಂ
ಪಡುವೊಡೆ ರುದ್ರಭೂಮಿ ನಿಮಗಲ್ಲದೊಡಾ ನಿಗಮೋತ್ತಮಾಂಗಮು-
ಣ್ಬೊಡೆ ವಿಷಮಲ್ಲದಿರ್ದೊಡೆ ಸಮಸ್ತಜಗಂ ನಿಮಗೇನನೆಂದಪರ್
ತೊಡುವೊಡೆ ಸರ್ಪನಲ್ಲದೊಡೆ ಕುಂಜರಚರ್ಮವೆ ಹಂಪೆಯಾಳ್ವನೇ ೨೦

ವಿನುತಬ್ರಹ್ಮಾಂಡಮಂ ಪುಟ್ಟಿಪ ಹರಹರ ಪಾಲಿಪ್ಪ ಸಾಮರ್ಥ್ಯರೆಂದೊಂ-
ದಿನಿಸುಂ ಕೊಂಡಾಡಿ ಭಾಪೆಂದಜಹರಿಗಳನಾಂ ಬಣ್ಣಿಸುತ್ತಿರ್ಪನೇ ಭೋಂ-
ಕನೆ ನಿಮ್ಮೊಂದಾಜ್ಞೆಯಿನ್ನೀ ಮನಕೆ ಮಸಕದಿಂದಂದು ತೋಱಲ್ಕೆಹೋ ಸ-
ಜ್ಜನ ವಾಕ್ಯಂ ಮುದ್ರಿಸಲ್ ಸುಮ್ಮನಿರುತೆ ಮಱವಟ್ಟೆಂ ವಿರೂಪಾಕ್ಷಲಿಂಗಾ ೨೧

ನವನಿಧಿ ಬಾರ ಪುಣ್ಯನಿಧಿ ಬಾರ ಮಹಾನಿಧಿ ಬಾರ ಭಕ್ತರು-
ತ್ಸವನಿಧಿ ಬಾರ ಭಾಗ್ಯನಿಧಿ ಬಾರ ಸುಧಾರಸಕಾಯಕಾಂತಿಯುದ್-
ಭವನಿಧಿ ಬಾರ ಸತ್ತ್ವನಿಧಿ ಬಾರ ಕೃಪಾನಿಧಿ ಬಾರ ಸತ್ಯಸಂ-
ಭವನಿಧಿ ಬಾರ ತತ್ತ್ವನಿಧಿ ಬಾರೆಲೆ ಬಾರೆಲೆ ಹಂಪೆಯಾಳ್ದನೇ ೨೨

ಹರಹರ ಕರ್ಮದೊಳ್ ಬಳಲದಿಂತು ಬರ್ದುಂಕಿದೆನ್ನೈ ಸದಾಶಿವಾ
ನರಪರ ಸೇವೆಯೊಳ್ ಕುದಿಯದಿಂತು ಬರ್ದುಂಕಿದೆನ್ನೈ ಮಖಾರಿಯ-
ಸ್ಥಿರಪರನೈವದೊಳ್ ತೊಡರದಿಂತು ಬರ್ದುಂಕಿದೆನ್ನೈ ಮಹೇಶ ಮದ್-
ಗುರುವೆ ಪುರಾರಿ ಪೂಜ್ಯನೆ ನಿಜಾಂಘ್ರಿಗೆ ಸಾರ್ಚಲೆ ಹಂಪೆಯಾಳ್ದನೇ ೧೩

ದೇವ ಮಹೇಶ ದೇವ ಗಿರಿಜಾಧಿಪ ದೇವ ಸಮಸ್ತಭಕ್ತಸಂ-
ಜೀವನ ದೇವ ಕಾಮಮದಮರ್ದನ ದೇವ ಹಿರಣ್ಯಗರ್ಭವಿ-
ದ್ರಾವಣ ದೇವ ವಿಷ್ಣುನಯನಾರ್ಚಿತಪಾದಪಯೋಜ ದೇವ ಸಂ-
ಸೇವಿತದೇವದೇವ ಮಮರಕ್ಷಕ ರಕ್ಷಿಸು ಹಂಪೆಯಾಳ್ದನೇ ೧೪

ಪುರವಂ ಸುಟ್ಟವನೀತನೀತನೆ ಹರಿಬ್ರಹ್ಮರ್ಗೆ ಸಾಮರ್ಥ್ಯದೊಂ-
ದಿರವಂ ಕೊಟ್ಟವನೀತನೀತನೆ ಮಹೋಗ್ರಾಭೀಳಸರ್ಪಂಗಳಾ-
ಭರಣಂದೊಟ್ಟವನೀತನೀತನೆ ಲಸಚ್ಛೀತಾಂಶುವಂ ಮೌಳಿಯೊಳ್
ಸ್ಥಿರವಾಗಿಟ್ಟವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೧೫

ಪರಮೇಶ ಪ್ರಭುವೀತನೀತನೆ ನಿಜಂ ನಂಬಿರ್ದ ಭಕ್ತರ್ಗೆ ತ-
ನ್ನಿರವಂ ತೋಱುವನೀತನೀತನೆ ಜಗತ್-ಸಂಹಾರವಂ ಮಾಡುವಾ
ಗರಳಂದಾಳ್ದವನೀತನೀತನೆ ಸಗರ್ವಂ ಪೆರ್ಚೆ ವಾಣೀಶನಾ
ಶಿರವಂ ಕಿಳ್ತವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೧೬

ಸ್ಮರನಂ ನೋಡಿದನೀತನೀತನೆ ಸಮುದ್ಯತ್ಕೋಪದಿಂ ದಕ್ಷನ-
ಧ್ವರಮಂ ಸುಟ್ಟವನೀತನೀತನೆ ಕುಱುತ್ತೆಯ್ತಂದು ನಿಂದಂಧಕಾ-
ಸುರನಂ ಮೆಟ್ಟಿದನೀತನೀತನೆ ಕರಂ ಬಂದಾರ್ಪಿನಿಂದಂ ಗಜಾ-
ಸುರನಂ ಸೀಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೧೭

ವಸುಧಾವಂದಿತನೀತನೀತನೆ ಮಹಾನಾಟ್ಯಾಭಿರಂಗಂ ವಿರಾ-
ಜಿಸೆ ನಿಂದಾಡಿದನೀತನೀತನೆ ನಿತಾಂತಂ ಭಕ್ತಯೂಥಕ್ಕೆ ಸಂ-
ತಸಮಂ ಸಾರ್ಚುವನೀತನೀತನೆ ಮುರಾರಿಬ್ರಹ್ಮರೊಲ್ದೊಲ್ದು ಪೂ-
ಜಿಸುವೀಶಪ್ರಭುವೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೧೮

ಜಿತಪುಷ್ಪಾಯುಧನೀತನೀತನೆ ಸರೋಜಾತಾಕ್ಷವಾಣೀಶವಂ-
ದಿತಸರ್ವೇಶ್ವರನೀತನೀತನೆ ಸಹಸ್ರಾಕ್ಷಪ್ರಮುಖ್ಯಾಮರಾ-
ರ್ಚಿತಪಾದಾಂಬುಜನೀತನೀತನೆ ಕಪಾಲಾಭೀಳಮಾಲಾವಿಮಂ-
ಡಿತವಕ್ಷಃಸ್ಥಳನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೨೯

ನತದೇವಾಧಿಪನೀತನೀತನೆ ವಿರಿಂಚೋಪೇಂದ್ರಮುಖ್ಯಸ್ಥಿತೋ-
ದ್ಧತಲಿಂಗೋದ್ಭವನೀತನೀತನೆ ಸಹಸ್ರಾಂಶುಪ್ರಮುಖ್ಯರ್ಕಳು-
ನ್ನತತೇಜೋನಿಧಿಯೀತನೀತನೆ ಪರಂಜ್ಯೋತಿಸ್ಸ್ವರೂಪಪ್ರಕಾ-
ಶಿತಪುಣ್ಯೋದಯನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೩೦

ತ್ರಿಜಗತ್ಪೂಜಿತನೀತನೀತನೆ ಸುರರ್ ಕೊಂಡಾಡೆ ದಿವ್ಯಾಸ್ತ್ರಮಂ
ವಿಜಯಂಗಿತ್ತವನೀತನೀತನೆ ಮನಂ ಮುಟ್ಟಿರ್ಪ ನಿಷ್ಕಾಮಃ ಭ-
ಕ್ತಜನಕ್ಕಾಶ್ರಯನೀತನೀತನೆ ಲಸತ್ಸಾಮರ್ಥ್ಯದಿಂದಂ ಶಿರೋ-
ವ್ರಜಮಂ ತಾಳ್ದವನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೩೧

ವೇದಕ್ಕುನ್ನತನೀತನೀತನೆ ಹರಿಬ್ರಹ್ಮಾದಿಗಳ್ ಮಾಳ್ಪ ಸಂ-
ವಾದಕ್ಕಗ್ಗಳನೀತನೀತನೆ ಶರಣ್ಬೊಕ್ಕಿರ್ದ ಭಕ್ತಾಳಿಯಂ
ಕಾದುಂ ರಕ್ಷಿಪನೀತನೀತನೆ ಗಣವ್ರಾತಕ್ಕೆ ತಾಯ್ ತಂದೆ ತಾ-
ನಾದಾ ಶಂಕರನೀತನೀತನೆ ವಿರೂಪಾಕ್ಷಂ ಲಲಾಟೇಕ್ಷಣಂ ೩೨

ಶ್ರೀಗಂಗಾಧರನಂ ಶಶಾಂಕಶಿಖಿಮಾರ್ತಂಡತ್ರಿಣೇತ್ರಾಂಕನಂ
ಭೋಗೀಂದ್ರಾರ್ಚಿತನಂ ರತೀಶವಿಪಿನಪ್ರೋದ್ಭೂತದಾವಾಗ್ನಿಯಂ
ಯೋಗಿವ್ರಾತಪರೀತನಂ ಶರಣಹೃದ್ರಾಜೀವಸಪ್ತಾಶ್ವನಂ
ನಾಗೇಂದ್ರಾಜಿನದಿವ್ಯವಸ್ತ್ರಧರನಂ ಕಂಡೆಂ ವಿರೂಪಾಕ್ಷನಂ ೩೩

ಹರನಂ ಶಂಕರನಂ ಶಶಾಂಕಧರನಂ ಕಾಪಾಲಿಯಂ ಕಾಲಸಂ-
ಹರನಂ ಶೂಲಿಯನೀಶನಂ ಗಿರಿಶನಂ ಭಾಳಾಕ್ಷನಂ ನೀಲಕಂ-
ಧರನಂ ಭರ್ಗನನುಗ್ರನಂ ಪರಮನಂ ಸರ್ವಜ್ಞನಂ ಶಂಭುವಂ
ಗಿರಿಜಾವಲ್ಲಭನಂ ಮನೋಜಹರನಂ ಕಂಡೆಂ ವಿರೂಪಾಕ್ಷನಂ ೩೪

ಎನ್ನಾನಂದಸುಧಾಬ್ಧಿವರ್ಧನಕಳಾಸಂಪನ್ನನಂ ಚೆನ್ನನಂ
ಮುನ್ನಾರುಂ ನೆಱೆ ಕಾಣಬಾರದ ಲಸತ್ಕಾಪಾಲಿಯಂ ಶೂಲಿಯಂ
ಭಿನ್ನಾಭಿನ್ನಮೆನಲ್ಕೆ ತೋಱದ ಮಹಾನಿಸ್ಸೀಮನಂ ಭೀಮನಂ
ಚೆನ್ನಂಗಂಡುಱೆ ತನ್ನನಿತ್ತ ಭವನಂ ಕಂಡೆಂ ವಿರೂಪಾಕ್ಷನಂ ೩೫

ಆನಂದಾಮೃತವಾರ್ಧಿಯಂ ಕೃಪೆಯೊಳೆನ್ನಂ ತೊಳ್ತುಗೊಂಡಾಳ್ದನಂ
ನಾನಾದೇವಕಿರೀಟಕೋಟಿವಿಲಸತ್ಪಾದಾಬ್ಜನಂ ಭೃತ್ಯಸಂ-
ತಾನಾಂಭೋಧಿಸುಧಾಂಶುವಂ ದುರಿತಘೋರಧ್ವಾಂತಮಾರ್ತಾಂಡನಂ
ಭಾಸುಜ್ಯೋತಿಗತರ್ಕ್ಯಕಾಂತಿಯುತನಂ ಕಂಡೆಂ ವಿರೂಪಾಕ್ಷನಂ ೩೬

ಅದೆ ನಾಗಾಸುರನುದ್ಧೃತರ್ಮವದೆ ಮೇಣ್ ವ್ಯಾಘ್ರಾಸುರಾಕೃತ್ತಿ ನೋ-
ಡದೆ ನಾರಾಯಣನೊಂದು ದೇಹವದೆ ತನ್ನೇತ್ರಂ ಸುರೇಂದ್ರಾದಿಗಳ್
ಬೆದರಲ್ಕಪ್ರತಿಮಪ್ರತಾಪನಿಧಿಯುಟ್ಟಂ ತೊಟ್ಟನಾರ್ದೆತ್ತಿದಂ
ಪದದೊಳ್ ಪತ್ತಿಸಿ ಬಾಳ್ದ ಭಾಸುರೆ ವಿರೂಪಾಕ್ಷಂ ಲಲಾಟೇಕ್ಷಣಂ ೩೭

ಗಣನೆಗೆ ಜಿಹ್ವೆಯುಂಟೆನಿಪ ಗರ್ವದೆ ಸಾದರಮೋವಿ ದೇವರೆಂ-
ದೆಣಿಸದಿರಣ್ಣ ಹಂಪೆಯರಸಂ ನಿಟಲಂದೆಱೆಯಲ್ ಬಳಿಕ್ಕದೆ-
ತ್ತಣ ಹರಿಯೆತ್ತಣಬ್ಜಭವನೆತ್ತಣ ವಾಸವನೆತ್ತಣಗ್ನಿಯೆ-
ತ್ತಣ ಯಮನೆತ್ತಣ ತ್ರಿದಶಸಂಕುಳಮೆತ್ತಣ ಭಾಸ್ಕರೇಂದುಗಳ್ ೩೮

ಬೆಳಗಿಂತೆಲ್ಲಿಯುದಲ್ಲಿ ಪೋಗದೆ ಅಹಾ ಅಃ ಅಕ್ಕಟಾ ಬೇವುವ-
ಗ್ಗಳದಿಂದಂ ತ್ರಿಪುರಂಗಳಳ್ಕಮೆಯುದಾವಂ ಸುಟ್ಟನಮ್ಮಮ್ಮ ಭೂ-
ತಳದೊಳ್ ನೀನಱಿವಾಂತನಲ್ತು ಸಿರದಿರ್ ಮತ್ತಾರ್ ದಿಟಂ ಪೇಳೆನಲ್
ತಿಳಿಯಲ್ ಹೋ ಮದನಾರಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ೩೯

ಮದನಂ ಗರ್ಜಿಸಿ ಬಿಲ್ಲುಮಂ ಸರಲುಮಂ ಕೈಕೊಂಡು ಬಂದಾರ್ದು ಸಂ-
ಮದದಿಂದೆಚ್ಚೊಡೆ ಸಚ್ಚರಿತ್ರವಿಭು ನಿಷ್ಕಾಮಿ ಸ್ವತಂತ್ರಂ ಸಕೋ-
ಪದೆ ಭುರ್ಭುಗಿಲೆಂಬಿನಂ ನೆಗಳ್ದ ನೇತ್ರಜ್ವಾಲೆಯಿಂ ತೊಟ್ಟನೋ-
ವದೆ ಸುಟ್ಟಂ ಮದನಾರಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ೪೦

ಮುಳಿದು ಭುಗಿಲ್‌ಭುಗಿಲ್‌ಭುಗಿಲೆನಲ್ ಸುಡನೇ ತ್ರಿಪುರಂಗಳಂ ಪೊಡ-
ರ್ವಳಿಯೆ ಘುರಿಲ್‌ಘುರಿಲ್‌ಘುರಿಲೆನಲ್ ಸುಡನೇ ಕುಸುಮಾಸ್ತ್ರನಂ ಕರಂ
ಕಳಿಯೆ ಛಿಳಿಲ್‌ಛಿಳಿಲ್‌ಛಿಳಿಲೆನಲ್ ಸುಡನೇ ಯಮನಂ ಮನುಷ್ಯ ನೀಂ
ತಿಳಿವೊಡನೀತಿಯಂ ಬಿಸುಟು ನಂಬಿ ಶರಣ್‌ಬುಗು ಹಂಪೆಯಾಳ್ದನಂ ೪೧

ಭಕ್ತರ ಬಂಧು ಭಕ್ತರ ಮಹಾನಿಧಿ ಭಕ್ತರ ಭಾವಸಂಪದಂ
ಭಕ್ತರ ಮಾತೆ ಭಕ್ತರ ಪಿತಂ ನಿಜಭಕ್ತರ ಪುಣ್ಯದೆಳ್ತರಂ
ಭಕ್ತರ ಮೂರ್ತಿ ಭಕ್ತರ ಸುಧಾಂಬುಧಿ ಭಕ್ತರ ಜೀವಮುನ್ನತಂ
ಭಕ್ತರ ಪೆಂಸು ಭಕ್ತಜನಕಂ ನೆಱೆ ಹಂಪೆಯದೇವನೊಚ್ಚತಂ ೪೨

ಶರಣಂ ಸಂಸಾರಿಯೇ ಮಾಣ್ ಪುಸಿ ಪುಸಿ ಶರಣಂ ಕಾಮಿಯೇ ಪೇಳಲೆಂತುಂ
ಶರಣಂ ತಾಂ ಕ್ರೋಧಿಯೇ ಸಲ್ಲದು ತೆಗೆ ಶರಣಂ ಮರ್ತ್ಯನೇ ಅಲ್ಲವೈ ಕೇಳ್
ಶರಣಂ ನಿರ್ಮಾಯನೆಂತುಂ ಶರಣನತುಳನಿಷ್ಕಾಮಿಯೆಲ್ಲಂಪದಿಂದಂ
ಶರಣಂ ಶಾಂತಂ ಸುಮರ್ತ್ಯಂ ಶರಣನಮುಮ ತಾನೇ ವಿರೂಪಾಕ್ಷಲಿಂಗಂ ೪೩

ಅದು ಕಣ್ಣಪ್ಪನ ಪೂಜೆಯೋಜೆ ಬಗೆಯಲ್ ವೇದೋಕ್ತಮೇ ಬೇಂಟೆಯಾ-
ಡಿದ ಜೊಮ್ಮಣ್ಣನ ಭಕ್ತಿಭಾವವಱಿಯಲ್ ವೇದೋಕ್ತಮೇ ತಂದೆಯೊ-
ನ್ನದೆ ಚಂಡೇಶ್ವರಪಿಳ್ಳೆಯಾಡಿದುದು ತಾಂ ವೇದೋಕ್ತಮೇ ಆತನೊ-
ಲ್ದುದೆ ವೇದಾಗಮನೀತಿ ಹಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ೪೪

ಉಣಸುಂ ಸ್ತ್ರೀಸಂಗಮುಂ ನಿದ್ರೆಯುಮಿವು ಮಲಮೂತ್ರಂಗಳುಂ ಕುಂದಗುಂ ಸದ್-
ಗುಣಮುಂ ಶಾಂತತ್ವಮುಂ ಕಾಂತಿಯುಮುರುತರಮಾರೋಗ್ಯಮುಂ ಪೆರ್ಚುಗುಂ ಸಂ-
ದಣಿಸಿರ್ದಾ ಕ್ರೋಧಮುಂ ಲೋಭಮುಮತಿಭಯಮುಂ ಮೋಹಮುಂ ಗರ್ವಮುಂ ತ-
ಲ್ಲಣಮುಂ ತೀರ್ಗುಂ ದಿಟಂ ನಿಮ್ಮಯ ನಿಜಶರಣಂಗಂ ವಿರೂಪಾಕ್ಷಲಿಂಗಾ ೪೫

ಪರಿಕಿಪರುಂಟೆ ಹಂಪೆಯಧಿನಾಥನ ಭಕ್ತರ ಸದ್ಗುಣಂಗಳಂ
ಹರಹರ ಪೇಳ್ವೊಡೆನ್ನಳವೆ ಕೇಳ್ವೊಡದಾರಳವೈ ಪುರಾತನರ್
ಪರಿದುದೆ [illegible] ಕೋ

ಹರಮರಿಯಿರ್ದುದೇ ಸಭೆ ನಿರೀಕ್ಷಣೆಗೆಯ್ದುದೆ ಲೋಕಪಾವನಂ ೪೬

ಇದು ದಿಟವೆಮ್ಮ ಹಂಪೆಯಾದಿನಾಥನ ಭಕ್ತರ ಮುಂದದಾವನೋ
ಅದಿರದೆ ನಿಲ್ವನಂತಕ-ಮನೋಜ-ಚತುರ್ಮುಖನಬ್ಜನೇತ್ರನೆಂ-
ದೊದವಿದತರ್ಕ್ಯರೆಂಬವರ್ಗೆ ಸುಟ್ಟಿಸ ಬಾರದು ರೂಹುದೋಱ ಬಾ-
ರದು ತಲೆಯೆತ್ತ ಬಾರದೆಮೆಯಿಕ್ಕಲೆ ಬಾರದಿಳಾತಳಾಗ್ರದೊಳ್ ೪೭

ಉರಿ ನಡೆವಂತೆ ಭಾನು ನಡೆವಂತೆ ಸಿಡಿಲ್ ನಡೆವಂತೆ ನಿನ್ನ ಭ-
ಕ್ತರ ನಡೆ ದೂಷಕಾವಳಿಗೆ ಹಂಪೆಯ ದೇವ ಸುಸಾತ್ವಿಕರ್ಗೆ ಸ-
ಚ್ಚರಿತಶಿವಾರ್ಚಕರ್ಗೆ ಸುಖಪೂರಿತಶಾಂತಿವಿಭೂಷಣರ್ಗೆ ಕೇಳ್
ಸಿರಿ ನಡೆವಂತೆ ಇಂದು ನಡೆವಂತೆ ಸುಖಂ ಸುಳಿವಂತೆ ಧಾತ್ರಿಯೊಳ್ ೪೮

ಘನಚೋದ್ಯಂ ನಿನ್ನ ಭಕ್ತಾಳಿಯ ನಡೆವಳಿ ಬೇಱೊಂದು ಸಂಸೃಷ್ಟಿ ಬೇಱೊಂ-
ದು ನಿಜಂ ಬೇಱೊಂದು ದೇಹಾಕೃತಿ ಹರಹರ ಬೇಱೊಂದು ಸಂಪತ್ತಿ ಬೇಱೊಂ-
ದನು ಬೇಱೊಂದಿಚ್ಛೆ ಬೇಱೊಂದಘಟಿತಘಟಿತಂ ಬೇಱದೊಂದಾಜ್ಞೆ ಬೇಱೊಂ-
ದಿಸಿದಾಹಾ ಕೌತುಕಂ ಬಣ್ಣಿಸಲರಿದರಿದೋ ಹೋ ವಿರೂಪಾಕ್ಷಲಿಂಗಾ ೪೯

ಜಾಣರದುಂಟದುಂಟಹಹ ದುರ್ವಿಷಯಂಗಳನೊಂದಿ ಬಾಳ್ವವರ್
ಜಾಣರದುಂಟದುಂಟಕಟ ಕರ್ಮದ ಕೈಯೊಳೆ ಸತ್ತು ಹೋದವರ್
ಜಾಣರದುಂಟದುಂಟಮನು ಕಾಲನ ಬಾಧೆಗೆ ಬಿಳ್ದು ನೋವವರ್
ಜಾಣರೆ ಜಾಣರಿಂದಿಹಪರಕ್ಕೆಲೆ ಭಕ್ತರೆ ಹಂಪೆಯಾಳ್ದನಾ ೫೦

ಇಲ್ಲಿ ಜಗಕ್ಕೆ ಪೂಜಿತರುಮಲ್ಲಿ ಪರಕ್ಕೆ ವಿಶೇಷಪೂಜ್ಯರಿಂ-
ತಿಲ್ಲಿಯುಮಲ್ಲಿಯುಂ ಮೆಱೆವರೆಲ್ಲಿಯುಮೆಮ್ಮ ಶಿವಾರ್ಚಕರ್ಗೆ ಮಾಣ್
ಎಲ್ಲಿಯ ವಿಷ್ಣುವೆಲ್ಲಿಯಜನೆಲ್ಲಿಯ ವಾಸವನೆಲ್ಲಿಯಗ್ನಿಯಿಂ-
ತೆಲ್ಲಿಯ ಮಾತು ಮೂಜಗದೊಳಾರ್ ಸರಿ ಪೇಳೆಲೆ ಹಂಪೆಯಾಳ್ದನೇ ೫೧

ಕಲಿಯಾತಂ ಕಾಂತನಾತಂ ಸುಮನಚರಿತನಾತಂ ಕಲಾಕಲ್ಪನಾತಂ
ಕಲೆಯಾತಂ ಭೋಗಿಯಾತಂ ಚತುರವಿನುತನಾತಂ ಚಿದಾನಂದನಾತಂ
ಛಲಿಯಾತಂ ಸತ್ಯನಾತಂ ಬುಧಜನಹಿತನಾತಂ ಜಗತ್‌ಪೂಜ್ಯನಾತಂ
ಸಲೆ ನಿಮ್ಮಂ ನಂಬಿ ನಿಚ್ಚಂ ಮಱೆಯದೆ ನೆನೆವಾತಂ ವಿರೂಪಾಕ್ಷಲಿಂಗಂ ೫೨

ನೋಡಿತೆ ಮಂಗಳಂ ನೆನಪೆ ಮಂಗಳಮಿರ್ದೆಡೆ ಮಂಗಳಂ ಕರಂ
ಪಾಡಿತೆ ಮಂಗಳಂ ಶರಣರೆಂದುದೆ ಮಂಗಳಮೊಲ್ದವರ್ ಮನಂ-
ಗೂಡಿತೆ ಮಂಗಳಂ ನಡೆಯೆ ಮಂಗಳಮಾಡಿತೆ ಮಂಗಳಾತ್ಮಕಂ
ಮಾಡಿತೆ ಮಂಗಳಂ ಪರಮಮಂಗಳವೈ ಎಲೆ ಹಂಪೆಯಾಳ್ದನೇ ೫೩

ಕಲಿಯಾವಂ ಶಿವಭಕ್ತನಚ್ಚಸುಖಿಯಾವಂ ಭಕ್ತನಾವರ್ತದಿಂ
ಛಲಿಯಾವಂ ಶಿವಭಕ್ತನುತ್ತಮನದಾವಂ ಭಕ್ತನೆಲ್ಲಂದದಿಂ
ಬಲಿಯಾವಂ ಶಿವಭಕ್ತನೂರ್ಜಿತನದಾವಂ ಭಕ್ತನೀಶಂಗೆ ಬೇ-
ಳ್ಪೊಲನಾವಂ ಶಿವಭಕ್ತನಾತನೆಲೆ ಸದ್‌ಭಕ್ತಂ ವಿರೂಪಾಕ್ಷನಾ ೫೪

ಕೊಂದಂ ಭಕ್ತಿಪುರಸ್ಸರಂ ಮಗನನಾಶ್ರೀಯಾಳಗೇನಾಯ್ತು ಮೇಣ್
ಕೊಂದಂ ಭಕ್ತಿಪುರಸ್ಸರಂ ಜನಕನಂ ಚಂಡೇಶಗೇನಾಯ್ತು ಪೋ
ಕೊಂದಂ ಭಕ್ತಿಪುರಸ್ಸರಂ ಜನನಿಯಂ ರಾಮಂಗದೇನಾಯ್ತು ಕೇಳ್
ಕುಂದೇ ತಾನದು ಭಕ್ತಿಯುಳ್ಳೊಡೆ ಸದಾಚಾರಂ ವಿರೂಪಾಕ್ಷನಾ ೫೫

ಮದಮಂ ಮಾಣ್ದು ದುರಾಶೆಯಂ ಪಱಿದು ಕಾಮಾಸಕ್ತಿಯಂ ಬಿಟ್ಟು ಸ-
ಮ್ಮದದಿಂ ಲಿಂಗಮನೊಲ್ದು ನೋಡಿ ನಲಿವಾ ಸದ್ಭಕ್ತನಂತಾತನಿ-
ರ್ದುದೆ ತಾರಾಚಲಮಾತನಿರ್ದುದೆ ಹಿಮಾದ್ರೀಂದ್ರಂ ಬಳಿಕ್ಕಾತನಿ-
ರ್ದುದೆ ವಾರಾಣಸಿಯಾತನಿರ್ದುದೆ ವಿರೂಪಾಕ್ಷಂಗೆ ಪಂಪಾಪುರಂ ೫೬

ಪೆಱತೊಂದಂ ನುಡಿಯಂ ಪ್ರಪಂಚರಹಿತಂ ಕಾರ್ಪಣ್ಯಮಂ ಮಾಡನೆ-
ಳ್ದೆಱಗಂ ಕಾಮದ ಬಟ್ಟೆಯತ್ತಲೆಳಸಂ ತರ್ಕಕ್ಕೆ ಮಾತ್ಸರ್ಯವೆಂ-
ದಱಿಯಂ ಲೋಕದ ಮಾನವರ್ಗೆ ಮಣಿಯಂ ಸದ್‌ಭಕ್ತಸತ್‌ಸಂಗಮಂ
ತೊಱೆಯಂ ಸತ್ಯಮನಲ್ಲದಾಡನಚಲಂ ಭಕ್ತಂ ವಿರೂಪಾಕ್ಷನಾ ೫೭

ನಿರಪೇಕ್ಷಂ ಕರುಣಾಕರಂ ಸುಖಮಯಂ ಶಾಂತಂ ಮಹೋತ್ಸಾಹಿ ಭ-
ಕ್ತಿರತಂ ಮಂಗಳಮೂರ್ತಿ ಲಿಂಗಸುಭಗಂ ಸಂತೋಷಿ ಸತ್ಯಂ ವಿಮ-
ತ್ಸರನುರ್ವೀಜನವಂದ್ಯಸುನ್ನತನನೇಕಾಶ್ಚರ್ಯಯುಕ್ತಂ ಮಹೇ-
ಶ್ವರನಾತಂಗರಿದುಂಟೆ ಹಂಪೆಯ ವಿರೂಪಾಕ್ಷಪ್ರಸಾದಾನ್ವಿತಂ ೫೮

ಶಿವಭಕ್ತರ್ ಮುಟ್ಟಿದಂಭಃಕಣಮೆ ಸಕಲತೀರ್ಥಂಗಳೆಂದೆಂಬುದಂ ಕಂ-
ಡೆವಲಾ ಕಣ್ಣಪ್ಪನೊಳ್ ಮಾಡಿದುದೆ ಜಗಕೆ ಸನ್ಮಾರ್ಗವೆಂದೆಂಬುದಂ ಕಂ-
ಡೆವಲಾ ಜೊಮ್ಮಣ್ಣನೊಳ್ ಮೆಟ್ಟಿದ ಧರೆ ಪರಮಕ್ಷೇತ್ರಮೆಂದೆಂಬುದಂ ಕಂ-
ಡೆವಲಾ ಭೋಗಣ್ಣನೊಳ್ ಹೋ ಶರಣರೆ ಪರದೈವಂ ವಿರೂಪಾಕ್ಷಲಿಂಗಾ ೫೯

ನತರಾಗಲ್ ಕಾದಪರ್ ನಿಂದೊಡೆ ಸರಭಸದಿಂ ಕೊಂದಪರ್ ಭೀತಿಯೊಳ್ ಸಂ-
ಯುತರಾಗಲ್ ಬಿಟ್ಟಪರ್ ತಾಂ ಮಱೆವುಗಲಸುವಿತ್ತಾಗ ಸೈತೋಡಲತ್ಯು-
ನ್ನತೆಯಿಂ ನಾಕೋರ್ವಿಯಂ ಜೀವಮನುರೆ ಕುಡುವರ್ ಮಾನದೊಳ್
ಶೌರ್ಯದೊಳ್ ವಾ-
ರತೆಯೊಳ್ ಭಕ್ತರ್ಗೆ ಪೋ ಮಾಣ್ ಸರಿ ದೊರೆ ಸಮನಾವಂ
ವಿರೂಪಾಕ್ಷಲಿಂಗಾ ೬೦

ಇವನಂ ನೋಡಿದ ಕಣ್ಗೆ ಮತ್ತೆ ಕೆಲವುಂ ರೂಪೇ ವಿರೂಪಾಕ್ಷನೆಂ-
ಬವನಂ ಮುಟ್ಟಿದ ಕೈಗೆ ಮತ್ತೆ ಕೆಲವುಂ ಮೆಯ್ಯೇ ಪೆಸರ್ಗೇಳ್ದ ಮ-
ಚ್ಛ್ರವಣಕ್ಕಕ್ಕಟ ನೋಡೆ ಮತ್ತೆ ಕೆಲವುಂ ನಾಮಂಗಳೇ ಸ್ತೋತ್ರಮಂ
ಸವಿವಾ ನಾಲಗೆಗೊರ್ಮೆ ಮತ್ತೆ ಕೆಲವುಂ ಮಾಣ್ ಮಾಣು ಶಬ್ದಂಗಳೇ ೬೧

ಮೃಡನಿರ್ದಂತಿರೆ ಕೋಟಿಕೂಟಕುಳದೈವಕ್ಕಾಸೆಯಂ ಮಾಡಿ ನೀಂ
ಕಿಡದಿರ್ ಮಾನವ ಬೇಡ ಬೇಡೆಲೆಲೆ ಪೂಣ್ಗೊಂಡಕ್ಕಟಾ ಸಾರಿದೆಂ
ನಡೆನೋಡರ್ಚಿಸು ಕೀರ್ತಿಸಾದರಿಸು ಪೆರ್ಚಾನಂದದಿಂ ಬೇಡು ಬ-
ಲ್ಪಿಡಿ ನಂಬೀಗಳೆ ನಚ್ಚು ಮಚ್ಚು ನಲವಿಂದೆಂದು ವಿರೂಪಾಕ್ಷನಂ ೬೨

ಸಾಲದೆ ನಿನ್ನ ಚಂಚಲತೆ ಸಾಲದೆ ನಿನ್ನ ಮದೋದ್ಧತಾಗುಣಂ
ಸಾಲದೆ ನಿನ್ನ ದುರ್ಮಮತೆ ಸಾಲದೆ ನಿನ್ನ ತಮೋವಿವರ್ಧನಂ
ಸಾಲದೆ ನಿನ್ನ ದುಷ್ಪ್ರಕೃತಿ ಸಾಲದೆ ನಿನ್ನ ದುರಾಶೆಯುಜ್ಜುಗಂ
ಸಾಲದೆ ಮೋಹದಿಂಪು ಮನವೇ ನೆನೆ ಹಂಪೆಯ ದೇವರಾಯನಂ ೬೩

ಅಕ್ಷಯಸಂಪದಂ ಕಿಡದ ಕೀರ್ತಿಯನೂನಪರಾಕ್ರಮಂ ಧರಾ-
ಈಕ್ಷಣಶಕ್ತಿ ದರ್ಪಕನನೇಳಿಪ ರೂಪಿನಿತೆಲ್ಲವಣ್ಣ ಕೇಳ್
ಈ ಕ್ಷಣದಿಂದೆ ಬರ್ಪುವೆಲೆ ಮಾನವ ಸಂಬಿಯಪರ್ಣಿಶಂ ವಿರೂ-
ಪಾಕ್ಷನನರ್ಚಿಸುನ್ನತನನರ್ಚಿಸಜಾತನನರ್ಚಿಸಳ್ಕಱಂ ೬೪

ಬಿಡು ಕರ್ಮಂ ದೈವಮೆಂದೆಂಬವರಳಿನುಡಿಯಂ ಬ್ರಹ್ಮರೊಳ್ ದಕ್ಷನೆಂಬಂ
ಪ್ಪೊಡನೇಕೆಂದೆಲ್ಲರಂ ಬಲ್ಲರನೆ ನೆರಪಿ ಕೊಂಡಾಡಿದಾ ಯಜ್ಞಕರ್ಮಂ
ಗಡ ಭಸ್ಮೀಭೂತವೇನಾಗದೆ ಸುಡು ಸುಡು ಮತ್ತಂ ವೃಥಾಕರ್ಮಮೆಂದು-
ಗ್ಗಡಿಸಲ್ವೇಡೊಲ್ದು ಬೇಡೆಮ್ಮ ಭವನನೊಸೆದೀವಂ ವಿರೂಪಾಕ್ಷಲಿಂಗಂ ೬೫

ಬಿಡು ಮಾಣ್ಮಾಣೆಲೆ ಬೊಮ್ಮವಾದಿನೊಲೆಯೊಳ್ ಕೇಳ್ನಂಬಿಗೆ ಊ
ಎನ್ನನೇ
ನ್ನೊಡನೆದ್ದಾಡನೆ ನಮ್ಮ ಗುಂಡಯನ ಮುಂದಾ ದಾಸಿಮಯ್ಯಂ ಕುಡಲ್
ಉಡನೇ ಸೀರೆಯನುಣ್ಣನೇ ಸಿರಿಯನಾಳ್ವಂ ಪೇಳೆ ಕೈಲಾಸಮಂ
ಕುಡನೇಸೂಱೆಯ ಚೇರಮಾಂಕಗೆ ವಿರೂಪಾಕ್ಷಂ ಲಲಾಟೇಕ್ಷಣಂ ೬೬

ಕೊಡಗೂಸೊರ್ವಳದೊಂದು ಬಟ್ಟಲೊಳೆ ಪಾಲಂ ತಂದು ಮುಂದಿಟ್ಟು ನೀಂ
ಕುಡಿಯೆಮ್ಮವ್ವೆ ದಿಟಂ ಕರಂ ಬಡಿವಳೆಂದಳ್ತಳ್ತು ಕಾರ್ಪಣ್ಯದಿಂ
ನುಡಿಯಲ್ಕಾ ನುಡಿಗಂಜಿ ತಾನರರೆ ಕಾರುಣ್ಯಾಕರಂ ಜೂಳಿಯಿಂ
ಕುಡಿಪಂ ಪಾಲನದೇಂ ಕೃಪಾಳುವೊ ವಿರೂಪಾಕ್ಷಂ ಲಲಾಟೇಕ್ಷಣಂ ೬೭

ಮುದಮಂ ಧಾತ್ರಿಗೆ ಮಾಳ್ಪುದಾವುದು ಗುಣಾಧೀಶಾಭಿದೆಯಕ್ಕದಾ-
ವುದು ವಾಚಾಸ್ಪದಮೆಂಬುದಾವುದು ಶಿವಾಚಾರಂ ಶಿವಾಚಾರಮು-
ಲ್ಲದೆ ಬೇಱಿಲ್ಲದು ತಾನೆಯೂರ್ಜಿತ ಗಡಂ ನಂಬೀಗ ಮುಂಸಾರ್ದು ನೀಂ
ಪದಪಿಂ ಮಾನವ ಮಾಡು ಲೇಸಿದು ಶಿವಾಚಾರಂ ವಿರೂಪಾಕ್ಷನಾ ೬೮

ಅನುಪಮಮಾರ್ಗವೆಮ್ಮ ಶಶಿಮೌಳಿಯ ಸಚ್ಚರಿತಂ ಧರಿತ್ರಿಗೊ-
ರ್ವನೆ ಗಣನಾಥನೆಂಬ ಶಿವಭಕ್ತನ ನೇಮುವನೊಲ್ದು ನೋಡಿ ಮು-
ಚ್ಚನೆಸುಖದೋಱ ಲೋಕನಱಯಲ್ ಪೆಗಲೇಱಸಿ ಕೊಂಡುಪೋದನಾ-
ತನನಸಿಮಿತ್ತ ಬಾಂಧವನದೇನೆನೆಸುತಿರ್ದಪೆ ಹಂಪೆಯಾಳ್ದನಂ ೬೯

ಸ್ಮರನಿಂ ಬೆಂಡುರಿವಂಗೆ ರೋಗತತಿಯಿಂದಂ ನೊಂದಳಲ್ವಂಗೆ ನಿ-
ಷ್ಠುರಮುಗ್ರಂ ಕಲುಷಂಗಳಿಂ ಬಳಲ್ವವಂಗತ್ಯುಗ್ರತಾಪಂಗಳಿಂ
ಕೊರಗುತ್ತಳ್ಕುವವಂಗೆ ಶತ್ರುಭಯದಿಂ ಬೀಳಾಗಿ ಬೀಳ್ವಂಗೆ ಸಾ-
ದರದಿಂ ಕಾಯಲಿದೊಂದೆ ಸಾಲ್ವುದು ದಿಟಂ ನಾಮಂ ವಿರೂಪಾಕ್ಷನಾ ೭೦

ಮನಮೊಸೆದರ್ಚಿಸರ್ಚಿಸು ಪೊಗಳ್ ಪೊಗಳಾಳ್ದನನಾಳ್ದನಂ ಕರಂ
ನೆನೆ ನೆನೆ ನೋಡು ನೋಡು ಮಱೆಗೊಳ್ ಮಱೆಗೊಳ್ ನೆಱೆನಂಬು
ನಂಬು ಕೆ-
ಮ್ಮನೆ ಕೆಡಬೇಡ ಬೇಡ ಭರದಿಂ ಸಲೆ ಮುಚ್ಚಿಲೆ ಮುಚ್ಚು ಮುಚ್ಚು ವಂ-
ಚನೆಗಿಡೆ ನಚ್ಚು ನಚ್ಚು ಮಿಗೆ ಬಲ್ವಿಡಿ ಬಲ್ವಿಡಿ ಹಂಪೆಯಾಳ್ದನಂ ೭೧

ಭರದಿಂ ಲಿಂಗಾರ್ಚನಂ ಮಾಡುವ ಶಿವಕುಲವೊಂದೇ ಶಿವಾಚಾರಮುಂ ಸದ್-
ಗುರುವೇನಂ ಪೇಳ್ದನೆಂತೆಂತವರವರೊಲವಿಂ ಸ್ವೇಚ್ಛೆಯಿಂ ಶರ್ವನಂ ಶಂ-
ಕರನಂ ಸರ್ವೇಶನಂ ಪೂಜಿಸುವುದಱೊಳೆಯಂತಾಯಿತೀತಾಯಿತೆಂದೆ-
ಲ್ಲರಮೊಂದಾಪೇಕ್ಷೆಯಿಂ ನೀಂ ಕಿಡದೆ ನೆನೆ ವಿರೂಪಾಕ್ಷನಂ ಕಾಂಕ್ಷೆಯಿಂದಂ ೭೨

ಗುರುಮತದಿಂ ಶ್ರುತಿಸ್ಮೃತಿಮತಂಗಳಿನಿಷ್ಟಮತಂಗಳಿಂದಮಾ-
ಡ್ಯರ ಮತದಿಂದೆ ನೀನೊಡೆಯನೆಂದಱಿದೀಶ್ವರ ನಿಮ್ಮನರ್ಚಿಸು-
ತ್ತಿರದಿರಪೆಲ್ಲರೊಳ್ ಮಥಿಸಿ ತರ್ಕಿಸಿ ನೋಯಿಸಿ ನೋಯುತುಂ ವೃಥಾ
ನೆರಮನೆಗಳ್ತು ಕಣ್ಗೆಡುವರೇಂ ಮರುಳ್ಗೊಂಡರೊ ಹಂಪೆಯಾಳ್ದನೇ ೭೩

ತೆಗೆ ತೆಗೆ ಮಿಕ್ಕ ಕೂಟಕುಳಿದೇವರನಾವಗಮುರ್ಕಿದಳ್ಕಱಿಂ
ಬಗೆ ಬಗೆ ಚಂದ್ರಚೂಡನ ಪದಾಂಬುಜಮಂ ಮನವಾಱೆ ಭಕ್ತಿಯಿಂ-
ದಗಿದಗಿದಂಗದೊಳ್ ಪುಳಕಮೇಳ್ತರಲೆಳ್ದು ಪೊರಳ್ದು ಲೀಲೆಯಿಂ
ನೆಗೆನೆಗೆದಾಡಿ ಮೆಯ್ಮಱೆದು ಪೂಜಿಸು ಮಾನವ ಹಂಪೆಯಾಳ್ದನಂ ೭೪

ಇದು ದಲಪೂರ್ವಮೀ ಮನುಜಜನ್ಮದೊಳುದ್ಭವಿಸಿರ್ದು ಮೂಗನಾ-
ಗದೆ ಸಲೆಯಂಧನಾಗದಿರೆ ಪಂಗುಳನಾಗದೆ ಕೂನದೇಹನಾ-
ಗದೆ ವಿಕಟಾಂಗನಾಗದೆ ಕಿವುಡನೆಯಾಗದೆ ಹೀನವರ್ಣನಾ-
ಗದೆ ಮೆಱೆವಲ್ಲಿ ಪೂಜಿಸು ಮಹೋತ್ಸವದಿಂದೆಲೆ ಹಂಪೆಯಾಳ್ದನಂ ೭೫

ಆರುತುಮರ್ಚಿಸುಬ್ಬರಿಸುತರ್ಚಿಸು ಮತ್ತೊಲೆಯುತ್ತುಮರ್ಚಿಸಿಂ-
ಪೇಱುತುಮರ್ಚಿಸುನ್ನತಿಯೊಳರ್ಚಿಸು ಕೊರ್ವುತುಮರ್ಚಿಸೆಲ್ಲರೊಳ್
ಪೋರುತುಮರ್ಚಿಸೀ ಜನನಮಂ ಪಡೆದಲ್ಲಿ ಮನುಷ್ಯ ಏನುಮಂ
ಪಾರದೆಯರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ೨೬

ಪಿರಿದಿದು ಸಾರಿದಪ್ಪೆನೆಲೆ ಸಾರಿದೆನಕ್ಕಟ ಸಾರಿದೆಂ ವೃಥಾ
ಚರಿಸದಿರಿಲ್ಲಿ ಪುಟ್ಟುವುದಪೂರ್ವಮಪೂರ್ವಮದಾಗಿಯಳ್ತಿಯಿಂ-
ದಿರೆ ನಲಿದುರ್ಬಿ ಬೊಬ್ಬಿಡುತೆ ಕೊರ್ಬುತೆ ಕೂಗುತೆ ಪಾಡುತಾಡುತ-
ಬ್ಬರಿಸುತೆ ಬೀಗಿ ತೂಗುತೊಸೆದರ್ಚಿಸು ಮಾನವ ಹಂಪೆಯಾಳ್ದನಂ ೨೭

ಮನೆ ನೆಳಲಾಗೆ ಪೆಂಡಿರಿನಿದಾಗೆ ಸುತರ್ ಪಿರಿದಾಗೆಯರ್ಥದಾ-
ರ್ಜನೆ ಘನವಾಗೆ ಯೌವನಮದಾಗೆ ಬಳಿಕ್ಕದನೇನನೆಂದಪೆಂ
ತನತನಗುರ್ವುತುಂ ಬಿಡದೆ ಕೊರ್ವುತೆ ಪರ್ವುತುಮುರ್ವಿಯೊಳ್ ಕರಂ
ನನೆಕೊನೆವೋಗಿ ಮಾಯೆ ಕೊಱಚಾಡದೆ ಮಾಣ್ಬುದೆ ಹಂಪೆಯಾಳ್ದನೇ ೨೮

ವರಮುಖ್ಯಂ ಶಂಕರಾಖ್ಯಂ ಸಕಲಜನಹಿತೋಪಾಖ್ಯನಾನಂದಸೌಖ್ಯಂ
ಸ್ಥಿರಕಾಯಂ ತಾನಜೇಯಂ ಧವಳತರತನುಚ್ಛಾಯನಾನಂದಗೇಯಂ
ಪರಿಪಾಲಂ ಗೀತಲೋಲಂ ಕಮಲಭವಶಿರಶ್ಶೂಲನೌದಾರ್ಯಶೀಲಂ
ಕರುಣಾಂಗಂ ಭಕ್ತಸಂಗಂ ಮನಸಿಜಮದಭಂಗಂ ವಿರೂಪಾಕ್ಷಲಿಂಗಂ ೨೯

ಎನಗಾಳ್ದಂ ತಾನೆ ಸೀಳ್ದಂ ಕರಿಪತಿತನುವಂ ಸೀಳ್ದನಿಂತೊಪ್ಪೆ ಬಾಳ್ದಂ
ಘನಗಾಢಂ ವೇದಗೂಢಂ ಸಕಲಗುಣಗಣಪ್ರೌಢನತ್ಯಂತರೂಢಂ
ದ್ಯುನದೀಶಂ ಚಿತ್ಪ್ರಕಾಶಂ ಶರಣಜನಸದಾತೋಷನಾನಂದಕೋಷಂ
ಮುನಿಸಂಗಂ ಸತ್ಯಶೃಂಗಂ ಕರುಣರಸತರಂಗಂ ವಿರೂಪಾಕ್ಷಲಿಂಗಂ ೩೦

ಪೊಗಳೆಂ ನಿಕ್ಕಿನ ಚಕ್ರಪಾಣಿಸರಸೀಜೋದ್ಭೂತಸಂಕ್ರಂದನಾ-
ದಿಗಳಂ ತಾನೆನೆ ಮರ್ತ್ಯಕೀಟಕರ ಮಾತಂತಿರ್ಕೆ ಮತ್ತಾವನಂ
ಬಗೆವಾರೆಂ ಬಿಡದಾ ಹರಂಗೆ ಶಶಿಭೂಷಂಗೀಶ್ವರಂಗೆಯ್ದೆ ನಾ-
ಲಗೆಯಂ ಮಾಱಿದೆನೊಲ್ದು ಹಂಪೆಯ ವಿರೂಪಾಕ್ಷಂಗದೇನೆಂದಪೆಂ ೩೧

ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ
ತನತನಗಿಂದ್ರ-ಚಂದ್ರ-ರವಿ-ಕರ್ಣ-ದಧೀಚಿ-ಬಲೀಂದ್ರನೆಂದು ಮೇಣ್
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಪಂಪೆಯಾಳ್ವನಂ ೪೨

ಎಡಹಿದೊಡಿಲ್ಲ ನಿದ್ರೆ ನಿಡಿದಾದೊಡವಿಲ್ಲುಸಿರಿಕ್ಕುತಿರ್ಪುಸಿರ್
ತಡೆದೊಡವಿಲ್ಲ ಬಿಕ್ಕು ಬಿಡದೊತ್ತಿದೊಡಂ ತಱಿಸಂದೊಡಿಲ್ಲ ಸೀಂ-
ತೊಡೆ ತನಗಿಲ್ಲ ಕೆಮ್ಮಿದೊಡವಿಲ್ಲದದಸ್ಥಿರಮಿಂತು ಕೆಟ್ಟು ಪೋ-
ಪ್ಪೊಡಲಿದಕೇಕೆ ಕಾಮನಿವಕೇಕೆ ಮದಾಂಧತೆ ಹಂಪೆಯಾಳ್ದನೇ ೪೩

ಜನಿಯಿಸುತಿರ್ಪ ಕೋಟಿಜನನಂಗಳೊಳುತ್ತಮಮುತ್ತಮೋತ್ತಮಂ
ಮನುಜಭವಂ ವಿಚಾರಿಪೊಡಿದಂ ಪಡೆದುಂ ಮರುಳಾಗಿ ಸತ್ತೊಡೀ
ಜನನವಿದೆಂದು ಬರ್ಪುದು ವೃಥಾ ಕೆಡದಿರ್ ಕೆಡದಿರ್ ನಿರಂತರಂ
ನಿನಗೆ ಹಿತೋಪದೇಶಮಿದು ಮಾನವ ಪೂಜಿಸು ಹಂಪೆಯಾಳ್ದನಂ ೪೪

ತನ್ನಯ ಕಾಮಮಂ ಸುಡದೆ ತನ್ನಯ ಕೋಪಮುಮಂ ತೆರಳ್ಚದೀ
ತನ್ನಯ ಲೋಭಮೋಹಮನೆ ತನ್ನ ಮದೋನ್ನತಮತ್ಸರಾಳಿಯಂ
ತನ್ನೊಳೆ ತಾನೆ ಸಂತವಿಡಲೊಲ್ಲದೆಯನ್ಯರನಿಂತು ಮಾಡೆನು-
ತ್ತುಂ ನೆಱೆ ಪೇಳ್ದು ಬುದ್ಧಿಗಲಿಸಲ್ ತೆಱಪೆಲ್ಲಿತು ಹಂಪೆಯಾಳ್ದನೇ ೪೫

ಹೆಂಡತಿ ಬಾರಳರ್ಥವದು ಬಾರದು ಪುತ್ರರೆ ಬಾರರಿಷ್ಟರುಂ
ಕಂಡ ಸಖೀಜನಂ ಜನನಿಯುಂ ಪಿತನುಂ ನೆಱೆ ಬಾರರಕ್ಕಟಾ
ತಂಡದ ಪಾಪಪುಣ್ಯವಿವೆ ಬರ್ಪುವಿವರ್ಕೆ ಮಹೇಶನಂ ನತಾ-
ಖಂಡಲವೃಂದನಂ ಬಿಡದೆ ಪೂಜಿಸು ಮಾನವ ಹಂಪೆಯಾಳ್ದನಂ ೪೬

ನರರಂ ಸೇವಿಸುತಯ್ಯ ಜೀಯೆನುತುಮಿರ್ಪೆನೆಂದೊಡಂ ದೈನ್ಯಮು-
ಬ್ಬರಿಸುತ್ತುಂ ತನುಗುಂದಿಯುಂ ತನಗೆ ತಾನೆಂತಕ್ಕೆಯುಂ ಬೇಡುತಿ-
ರ್ಪೆರವಂ ಸುಟ್ಟು ಬಿಸುಟ್ಟು ಭಕ್ತಿಯೊಳಗೋಲಾಡಲ್ ಮನಂದಂದು ಶಂ-
ಕರನಂ ಶಾಶ್ವತನಂ ಕೃಪಾಜಲಧಿಯಂ ಕಂಡೆಂ ವಿರೂಪಾಕ್ಷನಂ ೪೭

ಪೋಗೆನೆ ಪೋಪ ಬಾರೆಲವೊ ಬಾರೆನೆ ಜೀಯ ಹಸಾದವೆಂದು ಬೆ-
ಳ್ಳಾಗುತೆ ಬರ್ಪ ಮಾಣೆಲವೊ ಸುಮ್ಮನಿರೆಂದೊಡೆ ಸುಮ್ಮನಿರ್ಪ ಮು-
ತ್ತಾಗಳೆ ಝುಂಕಿಸಲ್ ನಡುಗಿ ಬೀಳುವ ಸೇವೆಯ ಕಷ್ಟವೃತ್ತಿಯಂ
ನೀಗಿದೆನಿಂದು ನಿಮ್ಮ ದಯೆಯಿಂ ಕರುಣಾಕರ ಹಂಪೆಯಾಳ್ದನೇ ೮೮

ಎಲೆಲೆಲೆ ಮೆಟ್ಟಿ ಕಿಳ್ತನಱಿಯಾ ಕಮಲೋದ್ಭವನೂರ್ಧ್ವವಕ್ತ್ರಮಂ
ತಲೆಕೆಳಗಾಗಲೆತ್ತಿ ಱಿದನಂದಱಿಯಾ ಸಲವಿಂ ಮುಕುಂದನ-
ಗ್ಗಲಿಸುವ ದೇಹಮಂ ತೊವಲನುರ್ಚಿದನೆಂದಱಿಯಾ ಗಜಾಸುರಾ-
ಕಲಿತಶರೀರಮಂ ಬಿಡು ಪೊಡರ್ಪವನಾವನೊ ಹಂಪೆಯಾಳ್ದನೊಳ್ ೮೯

ಮನುಜರ್ ಗಾವಿಲರೇನನೆಂಬೆನಳಿಪಂಗಾರ್ತಂಗೆ ಡಂಭಂಗೆ ದು-
ರ್ಜನಶೀಲಂಗೆ ಶಿವೋಪಜೀವನವೃಥಾಲಾಪಂಗೆ ಚೀ ಕಾಕಭಾ-
ಜನಮಂ ಮಾಡುವರಲ್ಲದಚ್ಚಶಿವಭಕ್ತಗೀರ್ಗಶಯುಕ್ತರ್ಗೆ ಲಾಂ-
ಛನಧಾರರ್ಗೊಲಿದೀವರಾರೊಳರೆ ಪೇಳ್ ಪಂಪಾವಿರೂಪಾಕ್ಷನೇ ೯೦

ಶಿವ ಶಿವ ಪುಣ್ಯಬಂಧುವೆ ಪುರಾತನಬಂಧುವೆ ಸರ್ವಜೀವಬಂ-
ಧುವೆ ಪರಮಾರ್ಥಬಂಧುವೆ ಸುಖಪ್ರದಬಂಧುವೆ ಬಾರನಾಥಬಂ-
ಧುವೆಯನಿಮಿತ್ತಬಂಧುವೆ ಮನೋಹರಬಂಧುವೆ ಆತ್ಮಪೂರ್ವಬಂ-
ಧುವೆ ಸಕಲೈಕಚೇತನಸುಬಂಧುವೆ ಬಂಧುವೆ ಹಂಪೆಯಾಳ್ದನೇ ೯೧

ಎರಡುಂಟೆಂದೆನುತಿರ್ಪ ಪಾತಕರ ಮಾತಂ ಮಾಱುವೆಂ ಮಾಱುವೆಂ
ಹರನೊರ್ವಂ ಗುರುವೆಂಬುದುಂ ಧರಣಿಗಂತಾಂ ಸಾಱುವೆಂ ಸಾಱುವೆಂ
ಪರವಾದಿಪ್ರಕರಕ್ಕೆ ತಕ್ಕೊಡೆ ವಿರೂಪಾಕ್ಷಪ್ರಸಾದತ್ವದಿಂ
ವರದೃಷ್ಟಾಂತಮನೀಗಳೀಗಳೊಲವಿಂದಂ ತೋಱುವೆಂ ತೋಱುವೆಂ ೯೨

ಜಗದೊಳಗೆಲ್ಲ ನೋಡುವೊಡಸತ್ಯಮೆ ತೀವಿ ತುಳುಂಕುತಿರ್ಪುದಂ
ಬಗೆವೊಡೆ ಭಕ್ತನೊರ್ವನದಱೊಳ್ ನೆಱೆ ಸತ್ಯಮನಾಡಲಾತನೇ
ಪಗೆಯೆನಿಸಿರ್ಪುದೇಕೆನಲಸತ್ಯಮೆ ತಾಂ ಸಿರಿವಾಗೆಯಂತದಂ
ಬಗೆಯದೆ ಸತ್ಯಮಂ ನುಡಿಯುತರ್ಚಿಸು ಮಾನವ ಹಂಪೆಯಾಳ್ದನಂ ೯೩

ಹರಿಯಂ ಕೃಷ್ಣಾವತಾರಾಂತ್ಯದೊಳ್ ಶಬರನುಂ ಕಾಲನೆಚ್ಚಲ್ಲಿ ಪೋಗಲ್
ಹರಣಂ ಕೊಂಡಾಡುತಿರ್ಪರ್ ಕೆಲಬರವನನಾ ವಿಷ್ಣುದೇಹಂಗಳಂ ಶಂ-
ಕರನುಟ್ಟಂ ತೊಟ್ಟನೆಂದೀ ಶರಣರೆನೆ ಕರಂ ಕಾಯ್ವರಯ್ಯೋ ವಿವೇಕಂ
ಪರಮಾಣಂ ಪುಟ್ಟದೀ ಶಾಪಹತರ ನುಡಿಯೋಪಾಳ್ತೆ ಪಂಪಾಧಿನಾಥಾ ೯೪

ಹರಿಸಯನಾರ್ಚಿತಾಂಘ್ರಿಯುಗಳಂ ಹರಿವೇಷಮುನಿಕಾಯಭೂಷಣಂ
ಹರಿಹರನೆಂದು ನಿನ್ನ ನಿಜಕೀರ್ತನೆಯಂ ಶರಣಾಳಿ ಕೂಡೆ ಡಂ-
ಗುರಿಸುತೆ ಸತ್ಯಮಂ ನುಡಿಯೆ ಸೇರದು ಶಾಪಹತರ್ಗೆ ನಿಂದೆಯಂ-
ತಿರೆ ಸಲುತಿರ್ಪುದಿಂತಿವರ ಪಾಪಮಿದಚ್ಚರಿ ಹಂಪೆಯಾಳ್ದನೇ ೯೫

ಪುಸಿಯುಂ ಪೇಳ್ವುದೆ ನಿಂದೆ ಸತ್ಯಮೆ ಕರಂ ಸ್ತೋತ್ರಂ ಹರಂ ಮಾಡಿತಂ
ಪುಸಿಯಲ್ಲಿಂತದಱಿಂದೆ ವಿಷ್ಣುನಯನಾಂಭೋಜಾರ್ಚಿತಂ ವಿಷ್ಣುಸಂ-
ವಸನಂ ವಿಷ್ಣುಶರೀರಶೂಲಧರನಾ ವಿಷ್ಣುಪ್ರದಂ ಭಾಪು ವಿ-
ಷ್ಣುಶಿರೋವೇಷ್ಟನನಿಂತು ಸಂಸ್ತುತಿಯಿಪೆಂ ಪಂಪಾವಿರೂಪಾಕ್ಷನಂ ೯೬

ಕೇಳೆಲೆ ವೈಷ್ಣವಾಳಿಗಳೆ ನಿಮ್ಮ ನೃಸಿಂಹನನಂದು ಕಾಣುತುಂ
ಕಾಳೆಗದಲ್ಲಿಯೆಮ್ಮ ಶರಭಂ ನುಡಿದೇನವನಕ್ಕಟಾ ನಿರೋ-
ಧಾಳಿಯನಿನ್ನುಮೊಂದನೆಲೆ ಪೇಳ್ವೆನೆ ದಕ್ಷನ ಯಾಗದಲ್ಲಿ ಛೀ
ಪೇಳಲದೇಕೆ ದೇವನಣುಗಂ ನಿಮಗೊಡ್ಡಿದ ಭಂಗಮೆಲ್ಲಮಂ ೯೭

ಸಡಿ ಘಡ ಮಾನವರ್ ಕುಡುವರೆಂಬುದನಾಡದಿರೆನ್ನ ಮುಂದೆ ಕ-
ಪ್ಪಡದ ಶರೀರಿಗಳ್ ತೃಣದ ಹಾಸೆಗಳಕ್ಕಟ ಮಣ್ಣ ಬೊಂಬೆಗಳ್
ಕುಡುವುವೆ ಬೇಡು ಬೇಡೊಲಿದುದೀವ ಮಹಾನಿಧಿಯಂ ಮಹೇಶನಂ
ಮೃಡನನನೂನದಾನಿಯನಲಂಪಿನ ಪೆಂಪಿನ ಹಂಪೆಯಾಳ್ದನಂ ೯೮

ಎಱಗುವೆನೆನ್ನ ಹಂಪೆಯರಸಂಗೆ ಹರಂಗೆ ಶಿವಂಗೆ ಮಿಕ್ಕನ-
ರ್ಗೆಱಗುವೊಡುಂಟೆ ಪಂಚಮುಖಮುಂಟೆ ಗಜಾಜಿನಮುಂಟೆ ಪತ್ತುತೋಳ್
ಕಱೆಗೊರಲುಂಟೆ ಕೆಂಜಡೆಗಳುಂಟೆ ಮರುನ್ನದಿಯುಂಟೆ ಫಾಳದೊಳ್
ಮಿಱುಗುವ ನೇತ್ರಮುಂಟೆ ಶಶಿಯುಂಟೆ ವೃಷಧ್ವಜಮುಂಟೆ ದೇವರೊಳ್ ೯೯

ಜಯಜಯ ಪುಣ್ಯಮಾರ್ಗಮಿದು ಸಾತ್ವಿಕಲಕ್ಷಣಮಿಂತಿದಾಪ್ಪರ-
ನ್ವಯಮಿದನೂನಭಕ್ತಿರಸಪೂರಮಿದುತ್ತಮಶೀಲಭಕ್ತರಾ-
ಶ್ರಯಮಿದು ತಪ್ಪನೆಂದು ಶರಣರ್ ಮಿಗೆ ಬಣ್ಣಿಸೆ ಪೇಳ್ದನಾಪ ಪಂ-
ಪೆಯ ಹರಿದೇವನೀ ಶತಕಮುಂ ಸಕಲೇಷ್ಟಫಲಪ್ರದಾತೃವಂ ೧೦೦

## ಸಂಪೂರ್ಣಂ

---

ತಾಳೆವೋಲೆಯ ಪ್ರತಿಯಲ್ಲಿ ೯೯ನೆಯ ಪದ್ಯವಾದ ಮೇಲೆ ಈ ಕೆಳಗಣ ಮೂರು ಪದ್ಯಗಳು ದೊರೆಯುತ್ತವೆ:—

ಆಹಾ ಕಷ್ಟಮನೇನ ಬಣ್ಣಿಪೆನದಂ ಸಂಸಾರದಾಯಾಸಮುಂ
ಬಾಹೋಗೆಂಬರನಾಸೆಮಾಡಿ ಪೆಱರಂ ಕೊಂಡಾಡಿ ಬೇಸತ್ತೆ ನೀ
ದೇಹಕ್ಕೋಸ್ಕರ ದೈನ್ಯಬಟ್ಟೆನಕಟಾ ನೀನಲ್ಲದನ್ಯತ್ರರಂ
ದೇಹೀ ಎಂಬುದ ಮಾಣಿಸೆನ್ನನುಳುಹಾ ಪಂಪಾಪುರಾಧೀಶ್ವರಾ ೧೦೧

ಮೃಡ ನೀಂ ಕಲ್ಲೊಳಗೇಕೆ ಪೊಕ್ಕುಸುರದಿಂತಿರ್ದಪ್ಪೆ ಭಕ್ತರ್ಗೆ ನೀಂ
ಕೊಡೆನಿನ್ನಿಲ್ಲೆನೆ ಸಾಲದೇನಡಗಲೇಕಿಲ್ಲೆಂಬುದಂ ಬಲ್ಲೆವಿ-
ಟ್ಟೊಡಲಿಂಗಿಲ್ಲದೆ ಮೋಕ್ಷ ಪರಾನ್ನದುಣಿಸಿಂ ದಾರಿದ್ರ ನೀನಾವಗಂ
ಬಡವಂ ಬಲ್ಲೆವು ಬೇಡೆವಂಜದಿರೆಲೇ ಪಂಪಾಪುರಾಧೀಶ್ವರಾ ೧೦೨

ವಾದಿನ್ನೇಕಬ್ಧಿಯೊಳ್ ಪುಟ್ಟಿದ ಘನಗರಳಂ ಬೆಂಕೊಳಲ್ ಪಕ್ಕೆಗೊಂಡೆ-
ಲ್ಲಾದೇವರ್ ಕಾವರಿಲ್ಲೆಂದಭವ ಭವತು-ಪಾದಾಬ್ಜದೊಳ್ ಬೀಳೆ ನಂಜುಂ-
ಡಾದಂ ಮೈದೋಱಿ ಕೂರ್ಪಿಂ ಸಿರಸತಿ ಮುಂತಾದರಿಟ್ಟೋಲೆಗಾದಾ-
ಮಾದೇವಂ ನೀನೆ ಮತ್ತಾರ್ ತ್ರಿಭುವನವಿಭು ಪಂಪಾವಿರೂಪಾಕ್ಷಲಿಂಗಾ ೧೦೩

---

# ಕಠಿಣ ಶಬ್ದಗಳ ಕೋಶ

## ರಕ್ಷಾಶತಕ

ವೃತ್ತ :

೧ ಚಂಚತ್-ಅಲುಗಾಡವ, ಜೋತಾಡವ

ಉತ್ತಂಸ-ಮುಂದಲೆಯ ಮೇಲಿನ ಮಾಲೆ, —ಆಭರಣ

೨ ಗುಲ್ಮ-ಗಿಡಗಂಟೆ

ಭೂರಿ-ದೊಡ್ಡ

ಭೂಜ-ಮರ

೩ ಮಾಸು-ಜರಾಯು, ಗರ್ಭದಲ್ಲಿ ಕೂಸನ್ನು ಸುತ್ತಿಕೊಂಡಿರುವ ಚೀಲ

ಪುರೀಷ-ಮಲ

ಕೆತ್ತಿರು (ಕೆತ್ತು+ಇರು)-ಮುಸುಕಿರು (ಕೆತ್ತು-ಮುಸುಕಿ) (ಧಾತು : ಕಿಱ್)

ಉಜ್ಜುಗ(ಸಂ: ಉದ್ಯೋಗ)-ಕೆಲಸ

೪ ಶ್ಲೇಷ್ಮ-ಕಫ

ತೋದು-ಒದ್ದೆಯಾಗಿ

ಬಧಿರ-ಕಿವುಡ

ಭೋಜ್ಯ-ಆಹಾರ; ಭೋಗವಸ್ತು

ಪಕ್ಕಾಗು-ಒಳಗಾಗು; ಅನುಭವಿಸು

೫ ವಿಕಳತೆ-ಮನಸ್ಸಿನ ಚಂಚಲತೆ, ದುಃಖ, ದುಮ್ಮಾನ

ಹೀಹಂದಿ-ಹೀಯ (ಹೀನ)ವಾದ ಹಂದಿ

ಎಣೆ-ಸರಿ, ಸಮಾನ

ವೃತ್ತ :

೫ ಬೇಳಾಗು-ಮರುಳಾಗು; ಹುಚ್ಚನಾಗು

ಬಱುದೊಱೆ-ಒಣಗಿಹೋದ ಹೊಳೆ

ಬಿಗುರ್ತೆಂ-ಭಯಗೊಂಡೆನು

೬ ಸ್ತೋಮ-ಸಮೂಹ

ಕಳ(ಟ)ಲ್ದು-ಬಿದ್ದು, ಜಾರಿ, ಸಡಿಲಾಗಿ

ರಾಗ-ಪ್ರೀತಿ, ಸಿಟ್ಟು ಮುಂತಾದ ಮನೋವಿಕಾರ

೭ ಏಪ್ರೊಳ್ತು(ಬ್ತು)ಂ-ಯಾವ ಹೊತ್ತಿಗಾದರೂ, ಯಾವಾಗಲೂ

೮ ಕೆಮ್ಮನೆ-ಸುಮ್ಮನೆ; ಕಾರಣವಿಲ್ಲದೆ

ಕ್ಷೇತ್ರ-ಹೊಲ

ನಿಕಾಯ-ಸಮೂಹ

ಆಕಲ್ಪ-ಆಭರಣ

ಕರಂ-ಚೆನ್ನಾಗಿ, ಬಹಳವಾಗಿ

ಕೂರ್ಮೆ-ಪ್ರೀತಿ

೯ ದೇಹೋಹಂ-ಶರೀರವೇ ನಾನು (ಎಂಬ ಭಾವನೆ)

ಉರ್ಬುವ-ಹೆಚ್ಚಾಗುವ

ವ್ಯೂಹ-ಸಮೂಹ

ಮಿಥ್ಯಾ-ನಿಜವಲ್ಲದದು, ಸುಳ್ಳಾದುದು

ಒತ್ತಂಬ-ಒತ್ತರ; ಪ್ರಾಬಲ್ಯ

೧೦ ಪರಿ-ಕತ್ತರಿಸು, ಹರಿದೋಗೆ

ಉಱದೆ-ನಿಲ್ಲದೆ, ಹಿಂಜರಿಯದೆ (ಧಾತು : ಉಱ್-ನಿಲ್ಲು)

ವೃತ್ತ :

೧೦ ಅಱಿಯುಟ್ಟು–ಹಿಂಪಕ್ಕೆ ಓಡಿಸು, (ಅಱಿ (ರೆ)–ಓಸ್ನೆಲೆ)

ಮಾತಂಗ–ಆನೆ

ಆರೋಹಕ-ಕುದುರೆ ಆನೆ ಮೊದಲಾದುವನ್ನು ಹತ್ತುವುದರಲ್ಲಿ ಚತುರನು

ಸಯ್ತಿಡು–ಸುಮ್ಮನಿರಿಸು

೧೧ ಬಲ್ಪು–ಶಕ್ತಿ, ಪರಾಕ್ರಮ

ತಗರ್ೊತ್ತು–ತಗ್ಗಿಸು, ಶಕ್ತಿ-ಗುಂದಿಸು

೧೨ ಸುಗುರ್ಱ–ಹತ್ತಿಕ್ಕು, ಹಿಂಡು, ಪುಡಿಮಾಡು, ಹಿಸುಕು

೧೩ ಬಿತ್ತ–ಪೆತ್ತ, ಹೊಂದಿದ

ಪಾಂಗು–ರೀತಿ, ತರ

ಪಳಿ–ನಿಂದಿಸು

೧೪ ಅಳ್ಕಱ್–ಪ್ರೀತಿ

ತೀವು–ತುಂಬಿಕೊಂಡಿರು

೧೫ ಎಂಟು–ಸೊಕ್ಕು

ನಿಮಿರ್–ಹರಡು, ಪಸರಿಸು

ಆತ್ಮೋದ್ಭವ–ಕಾಮ

ಮೂಲ–ಬೇರು

ಸಂತಂ ಮಾಡು–ಶಾಂತ–, ಸಮಾಧಾನ ಮಾಡು

೧೬ ಉದ್ಧತ=‘ಉದ್ಭಟ’, ಸೊಕ್ಕಿನ

ಓರಂತೆ–ಒಂದೇ ರೀತಿಯಾಗಿ

ಒಡತಣ-(ಒಡೆಯುತನ) ಆಳಿಕೆ, ಆವರಿಸಿಕೊಂಡಿರುವಿಕೆ

ವೃತ್ತ :

೧೭ ಭೂಷಣ–ಒಡವೆ, ಅಲಂಕಾರ

ವಿತತಿ–ಸಮೂಹ

ಉಳ್ತು-(ಱ್ತು)–ಹೊಲಮಾಡಿ (ಧಾ : ಉಱ್)

ತೆತ್ತುಂ–ಸುಂಕ, ಕರ, ಬಡ್ಡಿ ಮೊದಲಾದ ಹಣವನ್ನು ಕೊಟ್ಟು (ಧಾ–ತಿಱ್, ತೆಱು)

ಸುಗಿ–ಅಂಜು, ಅಳುಕು

ಅಲಸು–ಬೇಸರಪಡು

೧೯ ವಿಂಧ್ಯವಿತಾನ–ವಿಂಧ್ಯ ಮೊದಲಾದ ಪರ್ವತಗಳ ಸಾಲು

ಕಲ್ಪೋರ್ವೀಜ–ಕಲ್ಪವೃಕ್ಷ

೨೦ ಪಲ್ಗಿರಿ–ಹಲ್ಲುಕಿರಿ

೨೧ ವಿಪುಳತೆ–ಬಹಳ (ಕೆಲಸ)

ಕಾರ್ಪಣ್ಯವಕ್ತ್ರ–ದೈನ್ಯ–, ಬಡತನ ಸೂಚಿಸುವ ಮುಖ (ವುಳ್ಳವ)

ತನುಗಾತ್ರಂ–ಕೃಶವಾದ ದೇಹ (ವುಳ್ಳವನು)

ತುಷ-ಧಾನ್ಯದ ಮೇಲ್ಭಾಗ; ತವುಡು

ಮಾತ್ರ–ಗಾತ್ರ, ಪರಿಮಾಣ

ಬೇಳ್ಪ–ಬೇಡುವ

೨೨ ನಿರರ್ಥಾರ್ಥನಿಮಿತ್ತಂ–ಹುರುಳಿಲ್ಲದ ಧನ ಮೊದಲಾದವುಗಳ ಸಲುವಾಗಿ

೨೩ ಉರವಣಿಸು–ಪ್ರಜ್ವಲಿಸು

೨೪ ನವೆ–ಸಣ್ಣಾಗು

ಸೆಡೆ–ಬೆದರು

ತವಿಲಾಗು–ಕೃಶವಾಗು

ವೃತ್ತ :

೨೫ ಮಳ್ಗು(ಟು)-ಸಾಯುವಂತಾಗು, ಮಸಕಾಗು, ಮಾಸು

ಮಾಜುವೋಗು-ಮಾರಿಕೊಳ್ಳು

ಮುಯ್ಯಾನು-(೧) ಹೆಗಲು ಹಚ್ಚು, (೨) ಶಿಕ್ಷೆಹೊಂದು

ಕಿರ್ಗಯ್ಯಾಗು-ಕೈಕಿರಿದು (ಮುರಿದವನಂತೆ) ಆಗು

೨೬ ಉರಗ-ಹಾವು

ಆಸ್ಯ-ಮುಖ

ಆಲಗ್ನ-ಸೇರಿಕೊಂಡ

ಹರಿ-ಕಪ್ಪೆ

ದ್ವಿರದ-ಆನೆ

ಬೋಲ್-ಅಂತೆ, ಹಾಗೆ

ಪಿಂಗಿಸು-ಕಳೆ

೨೭ ಆರ್ತಿ-ಆಸೆ; ದುಃಖ

ಪೊಂಗಿಸು-ಹೆಚ್ಚಿಸು

ಕೈಗುಂದಿಸು-ಕಡಿಮೆಮಾಡು

ಪಥ್ಯ-ಹಿತವಾದ ಮಾತು

ವಕ್ರಿಸು-ಸಿಟ್ಟಿಡುಕೊಳ್ಳು

೨೮ ದ್ವಿರದ-ಆನೆ

ಪತಂಗ-ಮಿಂಚು-ಹುಳ; ಹೊನ್ನೆಯ ಹುಳ

ನಿಷ್ರೂಪಿ-ರೂಪುಗೆಟ್ಟವ

೨೯ ತಸ್ಕರ-ಕಳ್ಳ

ಕಂಟಕ-ಹಗೆ, ಸಂಕಟ, ಕಷ್ಟ (ಇತ್ಯಾದಿ)

೩೦ ಸ್ವೈತು-ಸುಮ್ಮನೆ, ಚೆನ್ನಾಗಿ

ವೈವಾಹ-ಮದುವೆ

ವೃತ್ತ :

ತೊಟ್ಟನೆ-ತಟ್ಟನೆ, ಒಮ್ಮೆಲೆ

ಬೇಳಪ್ಪ-ಮರುಳಾಗುವ

೩೧ ನೀರಕ್ಕರ-ನೀರಿನ ಮೇಲೆ ಬರೆದ ಬರೆಹ (ಸ್ಥಿರವಲ್ಲದದು)

ವಾಯ-ಹುಸಿ

ಮರೀಚೀಜಲ-ಬಿಸಲ್ಗುದುರೆ

ಅಚಿರ-ಅಸ್ಥಿರ

೩೨ ಎರವು-ಕಡವಾಗಿ ತಂದುದು; ಅಲ್ಪಕಾಲ ಬಾಳುವಂತಹದು

ಪುದು-ಎರಡನೆಯವರ ಕೂಡ ಹಂಚಿಕೊಳ್ಳುವಂತಹದು

ಔಪಾಧಿಕರ್-ತಮ್ಮ ತಮ್ಮ ಹಿತವನ್ನು ಸಾಧಿಸುವವರು

೩೩ ಶೈವಾಲ-ಹಾವಸೆ

ಮುಕುರ-ಕನ್ನಡಿ

೩೪ ಪೋರ್-ಹೋರಾಡು

ಅಭ್ರಾಳಿ-ಮೇಘ ಸಮೂಹ

ದುವಾಳ್-ಪ್ರಾಬಲ್ಯ

೩೫ ಪೊಳ್ತು-ಹೊತ್ತು, ಕಾಲ

೩೬ ಎರೆ-ಬೇಡು, ಯಾಚಿಸು

೩೭ ಪೊರ್ದು-ಹೊಂದು

ಆಣಂ-ಸ್ವಲಾದರೂ, ಏನಾದರೂ

ತನೆ-ಬಹಳವಾಗಿ, ಚೆನ್ನಾಗಿ

ಕಾವನರಿಂ-ಕಾವವರ್(ಕಾಯುವವರು)+ಇಂ(-ಇನ್ನೂ)

೩೮ ಎಂತಕ್ಕೆ-ಹೇಗಾದರೂ

ಆಱದೆ-ಶಕ್ತನಾಗದೆ

ಒಲೆ-ಅತ್ತಿತ್ತ ಒಲಿದಾಡಿಸು

ವೃತ್ತ

ಬಳ್ದು-ಬಾಳಿ

೩೯ ಒಱಪು-ಕಾಂತಿ, ಸೌಂದರ್ಯ

ಓಜೆ-ಶಕ್ತಿ

೪೦ ಕೆತ್ತು-ಮುಚ್ಚಿ (ಬಲಗುಂದಿ) (ಧಾ: ಕಿಡ್)

ಪೆಗೂರ್ಚಿರ್-ಹೆಚ್ಚಿನ ಉಬ್ಬಸ

ಅಂಟಂಟಿ-ಹಿಡಿದು ನೋಡಿ

ಪವಣು-ಹವಣು(ಸಂ: ಪ್ರಮಾಣ)

೪೧ ನಾನೇವೆಂ-ನಾನೇನು ಮಾಡಲಿ

ತನೂಜಾಳಿ (ತನೂಜ+ಆಳಿ)-ಮಕ್ಕಳ ಸಮೂಹ

ಕಾಷ್ಟರೂಪಿಂ-ಕಟ್ಟಿಗೆಯಂತೆ

೪೨ ನಿಷೇಧ-ಮಾಡಬಾರದಂತಹ ಕೃತಿಗಳು

ವ್ರಾತ-ಸಮೂಹ

ಹೇಯ-ನಿಂದ್ಯವಾದುದು

ನಿರೋಧ-ಸಂಕಟ

ಸ್ತೋಮ-ಸಮೂಹ

ಅಲಸು-ಬೇಸರಪಡು

ಅದಿರು-ಹೆದರು, ನಡುಗು

ಅನುಗೆಟ್ಟಿಂ-ಗತಿಗೆಟ್ಟಿನು

೪೩ ಅನೂನ-ಕೊರತೆಇಲ್ಲದ, ಊನವಾಗದ

ಅಘಟಿತಘಟಿತ-ಮೊದಲೆಂದೂ ಸಂಭವಿಸದಂತಹ (ಸಂಗತಿ)

೪೪ ಶರಣ್-ಆಶ್ರಯಸ್ಥಾನ

ಪರರ್-ಹೆಚ್ಚಿನವರು

ಬುಧದ್ವೇಷಿ-ತಿಳಿದವರನ್ನು ತಿರಸ್ಕರಿಸುವವ

ವೃತ್ತ :

ಪರ-ಎರಡನೆಯವ, ಅನ್ಯ, ಬೇರಾದವ

೪೬ ಆತುರ-(ವಿಷಯಾದಿಗಳಲ್ಲಿ) ಆಸೆಯುಳ್ಳವ

೪೭ ದೋಷಾರ್ತಿ-ದೋಷದಿಂದ ದುಃಖಪಡುವವ

೪೮ ಆಳಿಪ-ಆಸೆ ಮಾಡುವವ

ಗಳಪ-ಹಾಳು ಹರಟೆ ಕೊಚ್ಚುವವ

ಚಾರ್ವಾಕ-ದೇವರಲ್ಲಿ ನಂಬಿಗೆ ಇಲ್ಲದವ

೪೯ ವಿಮಾನ-ಮಾನಗೇಡಿ; ಅಳತೆ ಇಲ್ಲದವ

ನತಕಲ್ಪೋರ್ವೀಜ-ಶರಣರಿಗೆ ಬೇಡಿದುದನ್ನು ಕಲ್ಪವೃಕ್ಷದಂತೆ ಕೊಡುವಂತಹನು

೫೦ ಅನನ್ಯ-ಬಹಳ ಬೇಕಾದವನು

೫೧ ಖಳಜನಸಲಿಲಾವರ್ತ-ಕೆಟ್ಟ ಜನರಲ್ಲಿಯೆ ತಿರುಗಣಿ ಮಡದಲ್ಲಿ ತಿರುಗುವಂತೆ ತಿರುಗುವವ

ಗರ್ತ-ಆಳವಾದ ತಗ್ಗು

೫೨ ಮಸಕ-ಪ್ರಾಬಲ್ಯ, ಆವೇಶ

೫೬ ಪುದುವಾಳ್-ಕೂಡಿಕೊಂಡಿರುವ ಬಾಳುವೆ

೫೭ ಸಾಂಗತ್ಯ-ಸಂಗ, ಕೂಡುವಿಕೆ

೫೮ ದೋರ್ಯುಗ.(ದೋಸ್+ಯುಗ) ಬಾಹುಯುಗ; ರಟ್ಟೆಗಳು

೫೯ ಆರ್ತ-ಉತ್ಸುಕತೆ, ಆತುರತೆ

ಸೈಗೆಡೆದು-ನೆಟ್ಟಗೆ ನಮಸ್ಕಾರ ಮಾಡಿ

ವೃತ್ತ :

ತವನಿಧಿ–ಅಕ್ಷಯ ಸಂಪತ್ತು

ಕಾಪಿನಾಳ್–ರಕ್ಷಕ

೬೧ ಭೂತಿ–ವಿಭೂತಿ

೬೩ ವಾಮ–ಜೆಲ್ವಾದ

ವಿಕಾಸಾಬ್ಜ-ಅರಳಿದ ಕಮಲ (ಗಳುಳ್ಳ)

ನಿಷ್ಪಂದ-ಅಲುಗಾಡದ, ಕುಗ್ಗದ

೬೪ ಪ್ರಸೂನ–ಹೂ

ಪ್ರತಾನ-ಸಮೂಹ, ವಿಸ್ತಾರ

ದ್ಯುತಿ–ಬೆಳಕು, ಕಾಂತಿ

೬೫ ಮರಲ್ದು–ಅರಳಿ, ಹಿಗ್ಗಿ

ಮುನಿ–ಸಿಟ್ಟಾಗು

ತೊನೆ–ತೂಗಾಡು

ತವಕಿಸು–ಆತುರನಾಗು, ಆಸೆಮಾಡು

ಜಿನುಗು–ಗೊಣಗುಟ್ಟು

೬೭ ಸ್ಪಂದ–ಹಾರುವಿಕೆ, ಅಳ್ಳಿರಿಯುವಿಕೆ

೬೮ ಇರವಂ–ಇರುವಿಕೆಯನ್ನು, ಸ್ಥಿತಿಯನ್ನು

೭೦ ಅಸವಸ–ಅವಸರ, ತೀವ್ರತೆ

ಕೂರ್ಪರ್-ಪ್ರೇಮಿಗಳು, ಪ್ರಿಯರು

ದಾಕ್ಷಿಣ್ಯ–'ಬಿಡಯ', ನಮ್ರತೆ

೭೧ ಕೀಱದೆ–(೧)ಚೀರದೆ, (೨) ಸುಡದೆ

ತಾಱದೆ–ಒಣಗದೆ

೭೨ ಸೂಡು–ಧರಿಸು

ಕೋಡು–ನಡುಗು

೭೫ ಬೈತೊಡಂ–ಮುಚ್ಚಿಟ್ಟರೂ

ವೃತ್ತ :

ಒಂದಂದಂ–ಒಂದೇ ರೀತಿ

೭೮ ಒಚ್ಚತಂಗೊಡು-(ಸರಿಯಾಗಿ)ಬೆರೆ, ಕೂಡಿಕೊಳ್ಳು

೮೧ ಪೆಂಪು–ಹೆಚ್ಚಳ, ಹಿರಿಯತನ

ಸುಧಾ–ಅಮೃತ

೮೨ ಪರಮಾರ್ಥ–ಶ್ರೇಷ್ಠವಾದ ಸತ್ಯ

ಸಮ್ಯಕ್–ಸರಿಯಾದ

ತಾಮರಸೋದ್ಭೂತ-ಬ್ರಹ್ಮ [ತಾಮರಸ (–ಕಮಲ)+ ಉದ್ಭೂತ (–ಹುಟ್ಟಿದವ)]

ಶಕ್ರ–ಇಂದ್ರ

ಅಸುರರಿಪು–ವಿಷ್ಣು (-ರಾಕ್ಷಸರ ವೈರಿ)

ದಲ್–ನಿಜವಾಗಿ

೮೩ ಬಿಸ–ವಿಷ

ಅಸಮ– (ತನಗೆ ಮತ್ತಾರೂ) ಸರಿಯಿಲ್ಲದಂತಹನು

ಅನಘ–ಪಾಪರಹಿತ

೮೪ ರಸಾ–ಪೃಥ್ವಿ

ವ್ಯೋಮ–ಆಕಾಶ

ಅಭಿಜ್ಞಾನ–ಸರಿಯಾದ ತಿಳಿವಳಿಕೆ

೮೫ ಅರ್ಕ–ಸೂರ್ಯ

ಅಜರಂ–ಮುಪ್ಪಿಲ್ಲದವನು

ಪರಂಧಾಮ–ಶ್ರೇಷ್ಠವಾದ ಆಶ್ರಯಸ್ಥಾನ

೮೬ ಪುಣ್ಯಪಾಪಪ್ರದೂರಂ– ಪುಣ್ಯಪಾಪಗಳಿಗೆ ಸಂಬಂಧವಿಲ್ಲದವನು

ಕಾಲಘ್ನಂ–ಕಾಲ (ಯಮ) ನನ್ನು ಸಂಹರಿಸಿದವನು

ವೃತ್ತ :
ವಿಷಜ್ವಾಲ-ಕಷ್ಟಪರಂಪರೆ
೮೭ ಭೋಗೀಂದ್ರಭೂಷ- (ಶ್ರೇಷ್ಠ) ಹಾವುಗಳನ್ನು ಆಭರಣ ಮಾಡಿಕೊಂಡಂತಹಸು
೮೮ ಅಧ್ವರ-ಯಾಗ
೯೦ ಆಶ್ರವೆ (ಸಂ. ಆಶ್ರವ)- ದುಃಖ; ತಪ್ಪು

ವೃತ್ತ :
೯೨‡ಕೂರ್ಮರೋಮ-ಆವೆಯ ಕೂದಲು
‡ಶಶಿವಿಷಾಣ-ಮೊಲದ ಕೋಡು
‡ವಿಯತ್‌ಪುಷ್ಪ-ಆಕಾಶದ ಹೂ
‡ ಇವೆಲ್ಲ ಅಸಂಭವ
೯೯ ಕರ್ತಾರ-ಹುಟ್ಟಿಸುವವ
ಭರ್ತಾರ-ಪೋಷಿಸುವವ
ಹರ್ತಾರ-ಸಂಹರಿಸುವವ

## ಪಂಪಾಶತಕ

ವೃತ್ತ :
೧ ಅನಿಲ-ಗಾಳಿ
ಸುತ್ರಾಮ-ಇಂದ್ರ
ತ್ರಿದಶ-ದೇವತೆಗಳು
ವ್ರಜ-ಸಮೂಹ
೨ ಪಥ-ಹಾದಿ
ಮನೋಗಳಿತತರಾಬ್ಧಿ-ಮನಸ್ಸೆಂಬ (ಕುಂದಿದ) ಸಮುದ್ರ
೩ ತೊದಳ್-ತೊದಲು ನುಡಿ
೪ ಅಣಂ-ಎಳ್ಳಷ್ಟೂ, ಏನೂ ('ಇಲ್ಲ' ಎಂಬ ಅರ್ಥದ ಶಬ್ದದೊಡನೆ ಇದರ ಪ್ರಯೋಗ)
ಕೆಂಕರಿಸು-ಕೆಂಗಲಿಸಿ ಕೆಂಪಾಗು
೫ ಅಮರ್ದಪ್ಪು-(ಅಮರ್ದು+ಅಪ್ಪು) ಪ್ರೀತಿಯಿಂದ ಅಪ್ಪಿಕೊಳ್ಳು
೬ ತೆರೆಮುಸಗು-ತೆರೆಯಂತೆ ಆವರಿಸು

ವೃತ್ತ :
ತರಂಗಿಣಿ-ನದಿ
ಉಬ್ಬರಂಬರಿ-ತುಂಬಿ ಹರಿ ( ನದಿಗಳಂತೆ )
೭ ಇಡಿ-ಕೂಡಿಕೊಳ್ಳು, ಬೆರೆತು ಹೋಗು
೯ ಸೈಪು-ಪುಣ್ಯ
೧೦ ಪದೆ-ಇಚ್ಛಿಸು, ಆಶೆಮಾಡು, ತವಕಿಸು
೧೧ ಇರ್ಕೆಮ (ಇರ್ಕೆ+ಎಮ)- ತಪ್ಪದೆ ಇರಲಿ
೧೨ ಉದಿತ-ಕಟ್ಟಲ್ಪಟ್ಟ
೧೩ ನಡೆ-ದಿಟ್ಟಿಸಿ
೧೭ ಶಾರದ ಶಶಿ-ಶರತ್ಕಾಲದ ಚಂದ್ರ
೨೦ ಪಡು-ಮಲಗು
ರುದ್ರಭೂಮಿ-ಸ್ಮಶಾನ
ಉತ್ತಮಾಂಗ-ತಲೆ
ಕುಂಜರ-ಆನೆ

ವೃತ್ತ :

೨೧ ಮಱವಡು-ಎಚ್ಚರದಪ್ಪು, ಮೈಮರೆ

೨೪ ಮಖಾರಿ-ಯಜ್ಞಕ್ಕೆ ವೈರಿ- (ಶಿವನ ಹೆಸರು)

೨೫ ಅಭೀಳ-ಭಯಂಕರವಾದ

೩೦ ವಿರಿಂಚಿ-ಬ್ರಹ್ಮ

ಉಪೇಂದ್ರ-ಕೃಷ್ಣ, ವಿಷ್ಣು

೩೧ ವಿಜಯ-ಅರ್ಜುನ

ಶಿರೋವ್ರಜ-ರುಂಡಮಾಲೆ

೩೩ ರಾಜೀವ-ಕಮಲ

ಸಪ್ತಾಶ್ವ-ಸೂರ್ಯ

ಅಜಿನ-ಚರ್ಮ

೩೪ ಕಾಪಾಲಿ-(ಬ್ರಹ್ಮನ ಕಪಾಲವನ್ನು ಕೈಯಲ್ಲಿ ಹಿಡಿದುಕೊಂಡ)ಶಿವನು

೩೮ ನಿಟಿಲ-ಹಣೆಗಣ್ಣು

ವಾಸವ-ಇಂದ್ರ

೩೯ ಅಳ್ಕೆಮೆಸುಡು-ಪೂರ್ಣವಾಗಿ ಭಸ್ಮವಾಗುವಂತೆ ಸುಡು

೪೧ ಪೊಡರ್ಪು-ಶಕ್ತಿ, ಪರಾಕ್ರಮ

೪೨ ಎಳ್ತರ-ಹೆಚ್ಚಳ

೪೬ ಪರವರಿ-ಪ್ರಕಟವಾಗಿರುವುದು

೪೭ ಸುಟ್ಟಿಸು-ಬೆರಳಿನಿಂದ ತೋರಿಸು

೪೮ ಸಂಸೃಷ್ಟಿ-ಸಂಸಾರ, ಜಗತ್ತು

೪೯ ಅರಿದು-ಅಶಕ್ಯವಾದುದು

೫೨ ಸುಮನಚರಿತ-ನಿರ್ಮಲವಾದ ನಡತೆ

೫೪ ಆವರ್ತದಿಂ-ತಿರುತಿರುಗಿ, ಮೇಲಿಂದಮೇಲೆ, ಯಾವಾಗಲೂ

ಬೆಳ್ಪೊಲ-ಬೆಳೆದ ಹೊಲ

೫೬ ಕಾರ್ಪಣ್ಯ-ಬಡತನ, ದೈನ್ಯತೆ

೫೮ ಸುಭಗ-ಸೊಬಗುಳ್ಳ

ವೃತ್ತ :

೬೨ ಕೊಟಕೊಳದೈವ-ಅಸಂಖ್ಯ ದೇವತೆಗಳು

ಪೂಣ್ಗೊಳ್-ಪ್ರತಿಜ್ಞೆ ಮಾಡು

೬೬ ಸೀರೆ-ಬಟ್ಟೆ

೬೭ ಜೋಳಿ-(ಪಾತ್ರೆಯ) ಸೊಂಡಿಯಂತಹ ಬಾಯಿ

೭೫ ಮೂಗ-ಮೂಕ

ಪಂಗುಳ-ಕೈಕಾಲು ಕಳೆದುಕೊಂಡವ

೭೬ ಆರು-ದೊಡ್ಡ ದನಿಯಿಂದ ಒದರು

ಪಾರು-ಆಸೆಮಾಡು

೮೦ ದ್ಯುನದಿ-ಸುರನದಿ, ದೇವಗಂಗೆ

೮೨ ಅಹರ್ನಿಶಂ-ಹಗುಲುರಾತ್ರಿ, ಯಾವಾಗಲೂ

೮೫ ತೆಱಪು-ಸಮಯ

೮೬ ಆಖಂಡಲ-ಇಂದ್ರ

೮೮ ಹಸಾದ-ಪ್ರಸಾದ

ಝಂಕಿಸು-ಬೆದರಿಸು

೯೦ ಗಾವಿಲ-ಎಗ್ಗ, ಗಾಂಪ

ಕಾಕಭಾಜನ-ಕಾಗೆಯ ಪಾಲು, ಹಾಳು

೯೪ ಕಾಯ್-ಸಿಟ್ಟಾಗು

ಅಣಂ-ಎಳ್ಳಷ್ಟು

ಏವಾಳ್ತೆ-ಏನು ಉಪಯೋಗ?

೯೫ ಹರಿಹರ-ಹರಿ(=ನೃಸಿಂಹ) ಯನ್ನು ಸಂಹರಿಸಿದವನು

ಸಲುತಿರ್ಪುದು-ನಡೆಯುತ್ತಿರುವುದು

೯೬ ವಿಷ್ಣುಶಿರೋವೇಷ್ಟನಂ-ವಿಷ್ಣುವಿನ ತಲೆಯಲ್ಲಿ ( ಲಿಂಗರೂಪದಿಂದ ) ಕುಳಿತಂತಹನು

೯೭ ಹಾಹೆ-ಪಾಪೆ, ಗೊಂಬೆ

೯೮ ಅನ್ವಯ-ಹಾದಿ ಮಾರ್ಗ

ಮಹಾಕವಿ

## ಹರಿಹರದೇವನ ಸಮಗ್ರ ಗ್ರಂಥ ಪ್ರಕಟನ ಸಮಿತಿ

( ೧೯೪೩–೪೪ )

ಸಂಪಾದಕ ಮಂಡಲ :

ಪ್ರೊ. ಶಿ. ಶಿ. ಬಸವನಾಳ, ಎಂ. ಎ., ( ಕಾರ್ಯಾಧ್ಯಕ್ಷ)
ಶ್ರೀ. ವೀ. ಬ. ಹಾಲಬಾವಿ, ಬಿ. ಎ., ಎಲ್‌ಎಲ್. ಬಿ.
ಪ್ರೊ. ಸ. ಸ. ಮಾಳವಾಡ, ಎಂ. ಎ.
ಶ್ರೀ. ವೀ. ರು. ಕೊಪ್ಪಳ, ಎಂ. ಎ., ಬಿ. ಟಿ.
ಪ್ರೊ. ಸಂ. ಶಿ. ಭೂಸನೂರಮಠ, ಎಂ. ಎ.
ಶ್ರೀ. ಬುದ್ಧಯ್ಯಸ್ವಾಮಿ ಪುರಾಣಿಕ
ಶ್ರೀ. ಟಿ. ಗುರುನಂಜಯ್ಯನವರು, ಬಿ. ಎ., ಬಿ. ಎಲ್.
ಶ್ರೀ. ಎಮ್. ಜಿ. ವಿರೂಪಾಕ್ಷನ್
ಶ್ರೀ. ಆರ್. ಸಿ. ದೊಡವಾಡಮಠ, ಎಂ. ಎಸ್‌ಸಿ.
(ಕಾರ್ಯದರ್ಶಿ)

